# ಲೋಹಶಿಲ್ಪಿ
# ಟಿ. ರಾಘವ ಆಚಾರ್ಯ

ಬನ್ನಂಜೆ ಬಾಬು ಅಮೀನ್




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಕನ್ನಡ ಭವನ, ಚಾಲುಕ್ಯ ವಿಭಾಗ, ಜೆ.ಸಿ. ರಸ್ತೆ
ಬೆಂಗಳೂರು - 560 002

# ಲೋಹಶಿಲ್ಪಿ
# ಟಿ. ರಾಘವ ಆಚಾರ್ಯ

ಲೇಖಕರು:
**ಬನ್ನಂಜೆ ಬಾಬು ಅಮೀನ್**




**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**
ಕನ್ನಡ ಭವನ, ಮೇಲ್ಮನೆ, ಚಾಲುಕ್ಯ ವಿಭಾಗ, ಜೆ.ಸಿ.ರಸ್ತೆ,
ಬೆಂಗಳೂರು–೫೬೦೦೦೨

**Loha Shilpi Raghava Acharya**
Book written by Bannanje Babu Amin,
Published by Smt. Indramma H.V., Registrar,
Karnataka Shilpakala Academy, Kannada
Bhavana, J.C. Road, Bangalore 560 002.

ಮೊದಲ ಮುದ್ರಣ : 2016

ಪುಟಗಳು: 48 + 8
ಆಕಾರ: 1/8 ಡೆಮಿ
ಕಾಗದ: 70 ಜಿ.ಎಸ್.ಎಂ. ಲೈಟ್‌ವೇಯ್ಟ್ ಮ್ಯಾಪ್ಲಿಥೋ
ಪ್ರತಿಗಳು: 500

ಬೆಲೆ: ರೂ. 50



ಪ್ರಕಾಶಕರು: **ಶ್ರೀಮತಿ ಹೆಚ್.ವಿ. ಇಂದ್ರಮ್ಮ**
ರಿಜಿಸ್ಟ್ರಾರ್, ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಕನ್ನಡ ಭವನ, ಮೇಲ್ಮನೆ, ಚಾಲುಕ್ಯ ವಿಭಾಗ
ಜೆ.ಸಿ. ರಸ್ತೆ, ಬೆಂಗಳೂರು-560002

ವಿನ್ಯಾಸ: ಬಿ.ಎಸ್. ವಿದ್ಯಾರಣ್ಯ

ಮುದ್ರಣ: **ಚಾರುಮತಿ ಪ್ರಕಾಶನ**
224, 4ನೇ ಮುಖ್ಯರಸ್ತೆ, 3ನೇ ಅಡ್ಡರಸ್ತೆ
ಚಾಮರಾಜಪೇಟೆ, ಬೆಂಗಳೂರು 560 018

# ಅಧ್ಯಕ್ಷರ ನುಡಿ

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಶಿಲ್ಪಕಲಾ ಕ್ಷೇತ್ರದಲ್ಲಿ ಸಾಧನೆ ಮಾಡಿದಂತಹ ನಾಡಿನ ಹಿರಿಯ ಶಿಲ್ಪಿಗಳ ಪುಸ್ತಕವನ್ನು ಹೊರತರುವ ಯೋಜನೆಯಡಿ ಉಡುಪಿಯ ಹೆಸರಾಂತ ಎರಕದ ಮುಖವಾಡ ಶಿಲ್ಪ ಕಲಾವಿದರಾದ ದಿವಂಗತ ಶಿಲ್ಪಿ ಶ್ರೀ ಟಿ. ರಾಘವ ಆಚಾರ್ಯ ಅವರ ಜೀವನ ಮತ್ತು ಸಾಧನೆ ಎಂಬ ಪುಸ್ತಕವನ್ನು ಹೊರತರಲು ನಿರ್ಧರಿಸಿದೆ. ಈ ಸಂಬಂಧದಲ್ಲಿ ತುಳು ಮತ್ತು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮತ್ತು ಜಾನಪದ ಹಾಗೂ ದೈವಾರಾಧನೆಯಲ್ಲಿ ಆಳವಾದ ಅಧ್ಯಯನ ಮಾಡಿರುವ ಉಡುಪಿಯವರೇ ಆದ ಶ್ರೀ ಬನ್ನಂಜೆ ಬಾಬು ಅಮೀನ್ ಅವರನ್ನು ಅಕಾಡೆಮಿಯು ಕೋರಿದಾಗ ಅವರು ತುಂಬು ಮನಸ್ಸಿನಿಂದ ಒಪ್ಪಿ ಶ್ರೀಯುತರ ಪುಸ್ತಕವನ್ನು ಬರೆದು ಪುಸ್ತಕಕ್ಕೆ ಒಂದು ರೂಪವನ್ನು ಕೊಟ್ಟಿರುತ್ತಾರೆ. ಅವರಿಗೆ ನಾನು ಹಾಗೂ ಅಕಾಡೆಮಿಯು ತುಂಬು ಹೃದಯದ ಧನ್ಯವಾದಗಳನ್ನು ಅರ್ಪಿಸುತ್ತದೆ. ದಾಸವರೇಣ್ಯರು ಉಡುಪಿ ಶ್ರೀ ಕೃಷ್ಣನ ಮೂರ್ತಿಯನ್ನು

ಮನದಣಿಯೆ ಹಾಡಿದ್ದಾರೆ. ಅಂತಹ ಮೂರ್ತಿ ಶಿಲ್ಪ ರಚನಾ ಪರಂಪರೆಗೆ ಸೇರಿದವರು ಶ್ರೀ ಟಿ. ರಾಘವ ಆಚಾರ್ಯರು. ಚಿಕ್ಕ ವಯಸ್ಸಿನಲ್ಲಿಯೇ ತನ್ನ ತಂದೆ ಶ್ರೀ ಕರಿಂಬಾಚಾರ್ಯರಿಂದ ಹಾಗೂ ಅಣ್ಣ ಶ್ರೀ ರಾಮಾಚಾರ್ಯ ಅವರಿಂದ ಕಂಚಿನ ಉಪಕರಣಗಳ ತಯಾರಿಕೆ ಅಭ್ಯಸಿಸಿ ಸ್ಥಳೀಯವಾಗಿ ಪಾತ್ರ, ದೀಪ ಇತ್ಯಾದಿಗಳನ್ನು ಪೂರೈಸುತ್ತಿದ್ದರು. ಅಂದಿನಿಂದಲೇ ತಮ್ಮ ಕಲಾಕೌಶಲ್ಯದೆಡೆಗೆ ಮಾರುಹೋಗಿ ನಂತರದಲ್ಲಿ ಬಹಳ ಉತ್ತುಂಗವೇರಿದ ಕಲಾವಿದರಲ್ಲಿ ಶ್ರೀಯುತರು ಒಬ್ಬರು. ಕಲಾಸೇವೆಯಲ್ಲಿ ತಮ್ಮನ್ನು ತಾವು ತಮ್ಮ ಕಡೇ ದಿನಗಳವರೆವಿಗೂ ತೊಡಗಿಸಿಕೊಂಡಿದ್ದರು.

ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರ ಪರಿಚಯದಿಂದ ದೆಹಲಿಯ ಪ್ರಗತಿ ಮೈದಾನಲ್ಲಿ ಪ್ರಾತ್ಯಕ್ಷಿಕೆ ನೀಡಿದ ನಂತರದಲ್ಲಿ ಬೆಂಗಳೂರಿನ ಡಿಸೈನ್ ಸೆಂಟರ್‌ನಲ್ಲಿ ಕಲಾವಿದರಾಗಿ ನೇಮಕಗೊಂಡು ಶ್ರೀ ವಾದಿರಾಜ್ ಅವರ ಆಪ್ತವರ್ಗದಲ್ಲಿ ಒಬ್ಬರಾಗಿ ಗುರುತಿಸಿಕೊಂಡರು. ಇವರು ನಂತರದಲ್ಲಿ ಗಾಂಧಾರ ಬುದ್ಧ, ಸರ್ ಎಂ. ವಿಶ್ವೇಶ್ವರಯ್ಯ ಅವರ ಪ್ರತಿಮೆಗಳನ್ನು ಎರಕಹೊಯ್ದು ನಿರ್ಮಿಸಿದ ಪರಿ ಅವರನ್ನು ಎರಕ ಮಾಧ್ಯಮದಲ್ಲಿ ಹೆಸರು ಗಳಿಸುವಂತೆ ಮಾಡಿತು. ನಂತರದಲ್ಲಿ ಯಕ್ಷಗಾನದ ಪಾತ್ರಧಾರಿಗಳಿಗೆ ಗೆಜ್ಜೆ ತಯಾರಿಸಲು ಅರಂಭಿಸಿದಾಗ ಡಾ.ಶಿವರಾಮ ಕಾರಂತ, ಡಾ. ಮಾರ್ಥ ಆ್ಯಷ್ಟನ್, ಡಾ. ವೀರೇಂದ್ರ ಹೆಗಡೆಯಾದಿಯಾಗಿ ಸಾಕಷ್ಟು ಬೇಡಿಕೆಗಳು ಬರಲು ಪ್ರಾರಂಭವಾಯಿತು. ಇಂತಹ ಮಹಾನ್ ಜಾನಪದ ಎರಕ ಕಲಾವಿದರ ಪುಸ್ತಕವನ್ನು ನನ್ನ ಅವಧಿಯಲ್ಲಿ ಮುದ್ರಿಸುತ್ತಿರುವುದಕ್ಕೆ ಬಹಳ ಹೆಮ್ಮೆಯೆನಿಸುತ್ತಿದೆ. ಇಂತಹ ಪುಸ್ತಕವನ್ನು ಕಲಾಭಿಮಾನಿಗಳು ಬಹಳ ಆತ್ಮೀಯವಾಗಿ ಸ್ವಾಗತಿಸುತ್ತಾರೆ ಎಂಬ ಭರವಸೆ ಇದೆ. ಪುಸ್ತಕದ ಲೇಖಕರಾದ ಶ್ರೀಯುತ ಬನ್ನಂಜೆ ಬಾಬು ಅಮೀನ್ ಅವರಿಗೆ ಮತ್ತೊಮ್ಮೆ ಅಭಿನಂದನೆಗಳು. ಈ ಪುಸ್ತಕದ ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಮಾಜಿ ಅಧ್ಯಕ್ಷರಾದ

ಶ್ರೀ ವೆಂಕಟಾಚಲಪತಿ ಮತ್ತು ಟಿ. ರಾಘವ ಆಚಾರ್ಯ ಅವರ ಕುಟುಂಬ ವರ್ಗಕ್ಕೆ ಹಾಗೂ ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀಮತಿ ಇಂದ್ರಮ್ಮ ಹೆಚ್.ವಿ. ಅವರಿಗೂ ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಪುಸ್ತಕವನ್ನು ಅಂದವಾಗಿ ಮುದ್ರಣ ಮಾಡುತ್ತಿರುವ ಮಾಲೀಕರು, ಚಾರುಮತಿ ಪ್ರಕಾಶನ, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

## ಲೇಖಕರ ಮಾತು

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯವರ ವಿನಂತಿಯ ಮೇರೆಗೆ ಲೋಹಶಿಲ್ಪದಲ್ಲಿ, ವಿಶೇಷವಾಗಿ ಎರಕಕಲೆಯಲ್ಲಿ ಅಗ್ರಗಣ್ಯರಾದ ಟಿ. ರಾಘವ ಆಚಾರ್ಯರ ಕುರಿತಾಗಿ ಕಿರು ಹೊತ್ತಗೆಯನ್ನು ಸಿದ್ಧಪಡಿಸುವಲ್ಲಿ ನಾನು ನನ್ನ ಪ್ರಾಮಾಣಿಕ ಪ್ರಯತ್ನವನ್ನು ಮಾಡಿರುತ್ತೇನೆ ಎನ್ನುವ ಆತ್ಮವಿಶ್ವಾಸ ನನಗಿದೆ. ಪ್ರಸ್ತುತ ಕೀರ್ತಿಶೇಷರಾಗಿರುವ ಟಿ. ರಾಘವ ಆಚಾರ್ಯರು ಮೂಲತಃ ಕೇರಳ ರಾಜ್ಯದ ಪಯ್ಯನೂರಿನಲ್ಲಿ ಜನಿಸಿ ಬಂದವರು. ಅವರ ಚಿರಂಜೀವಿ, ಶಿಲ್ಪ-ಕಲಾವಿದ, ಉಡುಪಿಯ ರಾಜೇಶ್ ಆಚಾರ್ಯರು ನನ್ನ ಪರಮಾಪ್ತರು.

ಓರ್ವ ಹಿರಿಯ ಕಲಾವಿದರ ಹುಟ್ಟು-ಬದುಕು-ಕಲಾಸೇವೆ ಮೊದಲಾದವುಗಳ ಕುರಿತಾಗಿ ನಿರೂಪಿಸುವಾಗ ಲೇಖಕನಿಗೆ ಅನೇಕ ಇತಿಮಿತಿಗಳು ಇದಿರಾಗುವುದು ಸಹಜ ಮತ್ತು ಸ್ವಾಭಾವಿಕ. ಟಿ. ರಾಘವ ಆಚಾರ್ಯರ ಜೀವನ ಚರಿತೆಯನ್ನು ಬರೆಯುವಾಗ ಈ ಲೇಖಕನಿಗೂ ಅದೇ ತೆರನ ಅಡೆತಡೆ ಉಂಟಾದರೆ ಅದು ಅತಿಶಯೋಕ್ತಿಯಲ್ಲ. ಆದಾಗ್ಯೂ ಟಿ. ರಾಘವ ಆಚಾರ್ಯರ ಕುಟುಂಬ ಸದಸ್ಯರು ನೀಡಿದ ಮಾಹಿತಿಯನ್ನು ಅನುಲಕ್ಷಿಸಿಕೊಂಡು

ಈ ಕೃತಿಗೊಂದು ರೂಪು ನೀಡಲು ಎಲ್ಲ ಪ್ರಯತ್ನ ಮಾಡಿರುತ್ತೇನೆ. ಮಾತ್ರವಲ್ಲದೆ ನಾನು ಮುಂಬೈ ನಗರದ ವಾಸ್ತವ್ಯವನ್ನು ಶಾಶ್ವತವಾಗಿ ಮುಗಿಸಿಕೊಂಡು ಉಡುಪಿಯ ಹುಟ್ಟೂರು ಸೇರಿದ ಬಳಿಕ ಕಳೆದ 16 ವರ್ಷಗಳಿಂದ ಈ ಮೇರು ಕಲಾವಿದನ ಅತಿ ಸನಿಹದ ಒಡನಾಟ ಹೊಂದುವ ಸುಸಂದರ್ಭ ಒದಗಿ ಬಂತು. ಹಾಗಾಗಿ ಅವರ ಬಗೆಗಾಗಿ ಅನೇಕ ವಸ್ತುನಿಷ್ಠ ವಿಚಾರಗಳಲ್ಲಿ ವಿಶೇಷ ಮಾಹಿತಿಗಳನ್ನು ಕಲೆಹಾಕುವಲ್ಲಿ ಸಾಧ್ಯವಾಯಿತು.

ಒಟ್ಟಿನಲ್ಲಿ ಆ ಕಾಲಘಟ್ಟದಲ್ಲಿ ದೇಶ-ಕಾಲ-ಪಾತ್ರಗಳಿಗೆ ಅನುಸಾರವಾಗಿ ಟಿ. ರಾಘವ ಆಚಾರ್ಯರ ಉಡುಪಿ ಊರಿನ ಕಡೆಗಾದ ವಲಸೆ ತುಳುವ-ಕನ್ನಡಿಗರ ಭಾಗ್ಯವೆನ್ನುವುದನ್ನು ಎಲ್ಲರೂ ಒಪ್ಪಲೇಬೇಕಾಗಿದೆ. ಈ ದೃಷ್ಟಿಕೋನದಲ್ಲಿ ಟಿ. ರಾಘವ ಆಚಾರ್ಯರ ಬದುಕಿನ ಸುತ್ತ ಹೆಣೆಯಲ್ಪಟ್ಟ ಶಿಲ್ಪಕಲಾ ಪ್ರತಿಭೆ, ವಿಶೇಷವಾಗಿ ಎರಕ ಶಿಲ್ಪದಲ್ಲಿರುವ ಪ್ರಾವೀಣ್ಯತೆ ಈ ಪ್ರದೇಶಕ್ಕೆ ಕೊಡಲ್ಪಟ್ಟ ಬಹುದೊಡ್ಡ ದಾಖಲಾರ್ಹವಾದ ಕೊಡುಗೆ ಆಗಿರುವುದು.

ಇಂದು ಬದಲಾಗುತ್ತಿರುವ ತಂತ್ರಜ್ಞಾನದಲ್ಲಿ ಮನುಷ್ಯ ಎಲ್ಲ ಕೈಂಕರ್ಯಗಳಲ್ಲೂ ತನ್ನತನವನ್ನು ಕಳೆದುಕೊಳ್ಳುತ್ತಿದ್ದಾನೆ ಎನ್ನುವುದು ಸುಳ್ಳಲ್ಲ. ಎಲ್ಲಿದ್ದಾರೆ ನುರಿತ ಶಿಲ್ಪಿಗಳು? ಕುಶಲಕರ್ಮಿಗಳು? ಇಂದಿನ ಕಲಾಗಾರಿಕೆ ನಮ್ಮ ಹಿರಿಯರ ಕಾಲದ ಶಿಲ್ಪಿಗಳ, ಕಲಾಗಾರರ ಕೈಕೆಲಸದ ನೈಪುಣ್ಯತೆಯನ್ನು ಅವಲಂಬಿಸಿಲ್ಲ. ಇಂದು ಇಂಜಿನಿಯರಿಂಗ್ ಪದವೀಧರರ ಪ್ರತಿಭಾ ಸಾಮರ್ಥ್ಯದ ಆಧಾರದಲ್ಲಿ ಯಂತ್ರಗಳ ಮುಖೇನ ತಂತ್ರಗಾರಿಕೆಯಲ್ಲಿ ಎಲ್ಲವೂ ಸಿದ್ಧವಸ್ತುಗಳ ರೂಪದಲ್ಲಿ ದೊರೆಯುತ್ತಿದೆ. ಹಾಗಾಗಿ ಅವು ಉಪಯೋಗಿಸಿ ಪಡೆಯುವ ಹೊಸ ವಿಧಾನವನ್ನು ಅನುಸರಿಸುತ್ತಿವೆ. ನಮ್ಮ ಪೂರ್ವ ಹಿರಿಯರ ಶಿಲ್ಪದ ಸಾವಿರ ವರ್ಷಗಳ ಕಾಲ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಳ್ಳುವ ಯಾವ ವಸ್ತುವೂ ಇಂದು ಅಮೂಲ್ಯವೆನಿಸುವುದಿಲ್ಲ.

ಹಾಗಾಗಿ ನಾವು ಎಲ್ಲದರಲ್ಲೂ ಪರಾವಲಂಬಿಗಳು. ತನ್ನ ಬದುಕಿನ ಆದಿಯಿಂದ ಅಂತ್ಯದವರೆಗೂ ಪೇಟೆ ಪಟ್ಟಣಗಳ ವೈಭವೋಪೇತ ವಿಲಾಸಿ ಜೀವನಕ್ಕೆ ಮರುಳಾಗದೆ, ಗ್ರಾಮೀಣ ಬದುಕಿಗೆ ತನ್ನನ್ನು ಪೂರ್ಣ ಹೊಂದಿಸಿಕೊಂಡು, ನುಡಿದಂತೆ ನಡೆದು, ನಡೆದಂತೆ ಬಾಳ್ವೆ ನಡೆಸಿ ಸಾರ್ಥಕತೆಯ ಜೀವನವನ್ನು ಕಂಡುಂಡವರು ಟಿ. ರಾಘವ ಆಚಾರ್ಯರು. ಇಂತಹ ಮಹಾನ್ ತೇಜಸ್ವಿ, ಎತ್ತರಕ್ಕೆ ಬೆಳೆದ ಹಿರಿಯ ಚೇತನವನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಲು ಅತೀವ ಅಭಿಮಾನವೆನಿಸುವುದು. ಆಚಾರ್ಯರಿಗೆ ಶರಣು, ಶರಣೆಂಬೆ.

**– ಬನ್ನಂಜೆ ಬಾಬು ಅಮೀನ್**





# ಪಡು ಕರಾವಳಿಯ ಸಾಂಸ್ಕೃತಿಕ ವೈಭವ

ಒಂದು ಪ್ರದೇಶದ ಸಾಂಸ್ಕೃತಿಕ ವೈಭವವು ಅಲ್ಲಿ ಬದುಕುತ್ತಿರುವ ಜನ, ನೈಸರ್ಗಿಕ ವಾತಾವರಣ, ಮಳೆ-ಬೆಳೆ ಇವೆಲ್ಲವನ್ನು ಹೊಂದಿಕೊಂಡಿರುವುದು. ಅರಬ್ಬೀ ಸಮುದ್ರದ ತಟ ಪ್ರದೇಶವಾದ ಪಶ್ಚಿಮ ಕರಾವಳಿಯ ಉದ್ದಗಲವು ಮಳೆ-ಬೆಳೆಗೆ ಸಾಮ್ಯತೆಯನ್ನು ಪಡೆದಿರುವುದು. ಹಾಗಾಗಿ ತೆಂಕಣದ ರಾಮೇಶ್ವರದಿಂದ ಬಡಗಣ ಮಹಾರಾಷ್ಟ್ರದವರೆಗೂ ಕರಾವಳಿ ಪ್ರದೇಶದಲ್ಲಿ ಮಳೆಗಾಲ, ಚಳಿಗಾಲ, ಸೆಖೆಗಾಲದಲ್ಲಿ ಹೇಳಿಕೊಳ್ಳುವ ವ್ಯತ್ಯಾಸವಿರುವುದಿಲ್ಲ. ಹಾಗಾಗಿ ಕೇರಳ ಮತ್ತು ಕರ್ನಾಟಕದ ಸಾಂಸ್ಕೃತಿಕ ವೈಭವವು ಕರಾವಳಿಯ ದೃಷ್ಟಿಕೋನದಲ್ಲಿ ಭ್ರಾತೃಭಾವದ ಹೊಂದಾಣಿಕೆಯನ್ನು ಪಡೆದಿರುವುದು.

ಸಾವಿರಾರು ವರ್ಷಗಳಿಂದ ಜನಪದೀಯ ಸಂಸ್ಕೃತಿಯನ್ನು ತನ್ನ ಗರ್ಭದಲ್ಲಿ ಅಳವಡಿಸಿಕೊಂಡಿರುವ ತುಳುವನಾಡು ಕರಾವಳಿ ಕರ್ನಾಟಕದ ತೆಂಕಣ ರಾಮೇಶ್ವರದಿಂದ, ಬಡಗಣ ಅಂಕೋಲದವರೆಗೆ, ಪಡುವಣ ಅರಬ್ಬೀ ಸಮುದ್ರ ತಟಿಯಿಂದ ಮೂಡಣದ ಪಶ್ಚಿಮ ಘಟ್ಟದ ತಪ್ಪಲಿನವರೆಗೆ ವಿಸ್ತರಿಸಿಕೊಂಡಿತ್ತು ಎನ್ನುವುದು ಆ ಪ್ರದೇಶದ ಜಾನಪದ ಜಿಜ್ಞಾಸುಗಳ ಅಭಿಮತವೂ ಹೌದು. ಹಿಂದಿನ ಕಾಲದಲ್ಲಿ ಮೇಲೆ ವಿವರಿಸಿದ ಪ್ರದೇಶದ ಜನರ ಆಡು ಭಾಷೆ ತುಳು ಆಗಿತ್ತು. ತುಳು ಮತ್ತು ಮಲೆಯಾಳಿ ಲಿಪಿಗಳಲ್ಲಿ

ಸಾಮ್ಯತೆ ಇದ್ದು, ತುಳು ರಾಜಮನ್ನಣೆಯನ್ನು ಪಡೆದಿತ್ತು. ತುಳುವಿನಲ್ಲಿ ಆ ಕಾಲದಲ್ಲಿ ಅನೇಕ ಉದ್ಗ್ರಂಥಗಳು ರಚನೆಯಾಗಿರುವುದು ತಿಳಿಯುವುದು. ಅಪವಾದ ಹೊರತುಪಡಿಸಿದರೆ ತುಳು ಮತ್ತು ಮಲೆಯಾಳಿ ಭಾಷೆಗಳಿಗೆ ಸುಮಾರು 3,500 ವರ್ಷಗಳ ಇತಿಹಾಸ ಇದೆ ಎನ್ನುವುದು ಭಾಷಾತಜ್ಞರ ಅಂಬೋಣ. ಇಂದಿನ ದಿನಗಳಲ್ಲಿ ಬೇರೆ ಬೇರೆ ಕಾರಣಗಳಿಂದ ಈ ಪ್ರದೇಶಗಳು ತಮ್ಮ ಅಸ್ತಿತ್ವ ಮತ್ತು ಸರಹದ್ದುಗಳ ಮಟ್ಟಿಗೆ ಕುಸಿತವಾಗುತ್ತಿವೆ ಎಂದರೆ ಅಚ್ಚರಿ ಪಡಬೇಕಾಗಿಲ್ಲ. ಏನಿದ್ದರೂ ಇಂದಿಗೂ ತುಳುನಾಡಿನ ಉತ್ತರದ ಅಂಕೋಲೆಯವರೆಗೆ ಮತ್ತು ದಕ್ಷಿಣದಾದ್ಯಂತ ಮೂಲ ತುಳುವರ ಸಂಸ್ಕೃತಿ, ಜನಪದರ ಜೀವನಾವರ್ತ ಆಚರಣೆಗಳು, ಹಬ್ಬಗಳು, ದೈವಾರಾಧನೆಗಳು ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡಿರುವುದು ವಿಚಾರಾರ್ಹವಾಗಿರುವುದು.

ತುಳುನಾಡಿನ ಉದ್ದಗಲದಲ್ಲಿ ದೈವಗಳನ್ನು ಆರಾಧ್ಯಶಕ್ತಿಯಾಗಿ ಪೂಜಿಸಿಕೊಂಡಿರುವುದನ್ನು ನಾವು ಗಮನಿಸಬಹುದು. ಕೇರಳ ರಾಜ್ಯದಲ್ಲೂ ಬಹುತೇಕ ಈ ತೆರನ ದೈವಪೂಜೆಯನ್ನು ತೆಯ್ಯಂ ಎಂಬ ಆರಾಧನೆಯ ಮೂಲಕ ಆಚರಿಸುವರು. ಈ ದೈವ ಶಕ್ತಿಗಳಿಗೂ ವಾರ್ಷಿಕ ಕೋಲ, ನೇಮ ಮೊದಲಾದ ಉತ್ಸವಗಳು ಅತಿ ವಿಜೃಂಭಣೆಯಿಂದ ನಡೆಯುತ್ತಿವೆ.

ತುಳುನಾಡನ್ನು ಪೂರ್ವ ಹಿರಿಯರು ಪಂಚವರ್ಣದ, ನಾಗನಡೆಯ ಪುಣ್ಯದ ಭೂಮಿ ಎಂದು ಕರೆದಿರುವರು. ಕರಾವಳಿ ಕರ್ನಾಟಕದಾದ್ಯಂತ ಮತ್ತು ಕೇರಳ ರಾಜ್ಯದಲ್ಲೂ ನಾಗದೇವರ ಆರಾಧನೆಯು ವಿವಿಧ ರೀತಿಯ ಪೂಜಾಕ್ರಮಗಳ ಮುಖೇನ ಸಂಪನ್ನಗೊಳ್ಳುತ್ತಿರುವುದು. ಬಹುತೇಕ ತುಳುನಾಡಿನ ವೈದಿಕೇತರ ತುಳುವರು ತಾಯಿ ಮೂಲದ ಕೂಡು ಕುಟುಂಬ ಪದ್ಧತಿಯನ್ನು ಬದುಕಿನಲ್ಲಿ ಅಳವಡಿಸಿಕೊಂಡವರು.





ಈ ಪ್ರದೇಶದಲ್ಲಿ ನೆಲೆಸಿರುವ ಮೂಲ ತುಳುವರಲ್ಲಿ ಬಹು ಸಂಖ್ಯಾತ ಜಾತಿಯವರು ಬಂಟ (ಕೇರಳದಲ್ಲಿ ನಾಯಕ್ ಜನಾಂಗಕ್ಕೆ ಸಮೀಪವರ್ತಿಗಳು); ಬಿಲ್ಲವ (ಈಳವ, ತಿಯಾ ಇತ್ಯಾದಿ); ಮೊಗವೀರ (ಮೀನುಗಾರರು) ಮತ್ತು ಸಂಖ್ಯೆಯಲ್ಲಿ ಕಡಿಮೆ ಇದ್ದರೂ ಸಾಂಸ್ಕೃತಿಕವಾಗಿ ಶ್ರೇಷ್ಠರೆನಿಸಿರುವ ಮುಂಡಾಲ ಮತ್ತು ಕೊರಗರು. ಈ ಐದು ವರ್ಣಗಳು (ಜಾತಿಗಳು) ಸೇರಿ ಉಂಟಾದ ಐಕ್ಯ ಗುಂಪು ಪಂಚವರ್ಣ ಎನ್ನುವುದು ಜಾನಪದ ಪಂಡಿತರ ಅರ್ಥೈಸುವಿಕೆಯಾಗಿರುವುದು.

ಕರಾವಳಿಯ ಭೂಮಿಯಲ್ಲಿ ಎಲ್ಲಿ ನಡೆದರೂ ಅದು ನಾಗನಡೆ (ನಾಗ ಸಂಚರಿಸುವ ದಾರಿ–ಬೀದಿ); ಎಲ್ಲಿ ಅಗೆದರೂ ಅಲ್ಲಿ ನಾಗನ ಕಲ್ಲು (ನಾಗನನ್ನು ನೆಲೆಗೊಳಿಸುವ ಸಾಂಕೇತಿಕ ಪ್ರತೀಕ, ಮುಂದೆ ಮಣ್ಣಡಿಯಲ್ಲಿ ಸೇರಿಕೊಂಡಿರುವುದು) ಸಿಗುವುದು. ಅಲ್ಲಲ್ಲಿ ನಾಗಬನಗಳು, ಹುತ್ತಗಳು ಹರಡಿಕೊಂಡಿರುವುವು. ಒಂದು ಹೇಳಿಕೆಯಂತೆ ತುಳುನಾಡು ಪೂರ್ವಕಾಲದಲ್ಲಿ ನಾಗರಖಂಡ ಎಂದೇ ಪ್ರಸಿದ್ಧಿ ಪಡೆದಿತ್ತು. ಮೂಲ ತುಳುವರು ನಾಗ ಸಂತತಿಯವರು. ಆದುದರಿಂದ ಈಗಲೂ ಈ ಪರಿಸರದಲ್ಲಿ ಜಾತಿನಾಗ ತೀರಿಕೊಂಡರೆ ಅದನ್ನು ಅನಾಥ ಶವವಾಗಿ ಬಿಟ್ಟು ತೆಪ್ಪಗಿರಕೂಡದು. ಕೂಡು ಕುಟುಂಬದ ವ್ಯಕ್ತಿಯೊಬ್ಬ ಗತಿಸಿದರೆ ಅವರ ಕ್ರಿಯೆ ನಿರ್ವಹಿಸುವ ರೀತಿಯಲ್ಲಿ ನಾಗನಿಗೂ ಕ್ರಿಯೆ (ಸಂಸ್ಕಾರ) ನಡೆಸಬೇಕೆನ್ನುವುದು ತುಳು ಜನರ ಬಲವಾದ ನಂಬಿಕೆ. ಕರಾವಳಿಯ ಜನರಲ್ಲಿ ಈ ನಂಬಿಕೆ ಇಂದಿಗೂ ರಕ್ತಗತವಾಗಿ ಹರಿದು ಬಂದಿರುವುದು. ನಾಗ ತುಳು ಮೂಲದ ಜನರ ಆರಾಧನಾ ಪ್ರಕ್ರಿಯೆಯಲ್ಲಿ ಸಾಮಾನ್ಯ ಸ್ಥಾನ ಪಡೆದಿರುವುದು. ತುಳುವರ ತಾಯಿ ಮೂಲದ (ಮಾತೃಮೂಲೀನ) ಕೂಡು ಕುಟುಂಬದ ಹೆಣ್ಣು ಸಂತತಿಯ ಅಭಿವೃದ್ಧಿ, ಏಳಿಗೆ, ಸಕಲ ಅಭ್ಯುದಯ ನಾಗನಿಂದಲೇ ಎಂಬ ಅಚಲ ನಂಬಿಕೆ ಈಗಲೂ ಉಳಿದುಕೊಂಡಿರುವುದು. ಕೇರಳ ರಾಜ್ಯದ ಹೆಚ್ಚಿನ ಪ್ರದೇಶಗಳಲ್ಲಿ

ತುಳುನಾಡಿನಂತೆಯೇ ನಾಗನನ್ನು ಜನ ಪ್ರಮುಖ ಆರಾಧನಾ ಶಕ್ತಿಯಾಗಿ ಪರಿಗಣಿಸಿರುವರು ಮಾತ್ರವಲ್ಲ ತುಳುವರ ನಾಗಮಂಡಲಕ್ಕೆ ಪರ್ಯಾಯವಾಗಿ ಅತ್ಯಂತ ಶಿಸ್ತುಬದ್ಧ ಧಾರ್ಮಿಕ ಮಹತ್ವಿಕೆಯುಳ್ಳ ನಾಗಪೂಜೆಯನ್ನು ನಡೆಸುತ್ತಿರುವುದನ್ನು ಗಮನಿಸಬಹುದು.

ತುಳುವರು ಕೂಡು ಕುಟುಂಬದಲ್ಲಿ ಹೆಣ್ಣು ಸಂತತಿಯ ಉತ್ಪತ್ತಿ ಮತ್ತು ಬೆಳವಣಿಗೆಯಲ್ಲಿ ವಿಶೇಷ ಕಾಳಜಿ, ಆಸೆ, ವಹಿಸುವರು. ತಾಯಿ ಮೂಲದ ದೊಡ್ಡ ಹಡಗಿನ ತೆರನ 60–80 ಸದಸ್ಯರ ಗೃಹಗತಿಯಲ್ಲಿ ಮನೆತನದ ಹಿರಿಯ ಹೆಣ್ಣು ಎಲ್ಲ ಸ್ಥಿರ ಚರ ಸ್ವತ್ತುಗಳಿಗೆ ಹಕ್ಕುದಾರಳು. ಕುಟುಂಬದ ಬೆಳವಣಿಗೆಯ ಮೂಲಾಧಾರ ಸಂತತಿಯ ಸುಳಿ ಹೆಣ್ಣು ಮಗು.

ಈ ಸುಳಿ(ಉತ್ಪತ್ತಿ)ಯ ರಕ್ಷಣೆ ಮತ್ತು ಅಭ್ಯುದಯಕ್ಕಾಗಿ ತುಳುನಾಡಿನ ಕುಟುಂಬದ ಯಜಮಾನರು ಅನನ್ಯ ಭಕ್ತಿ, ಶ್ರದ್ಧೆಯಿಂದ ಕಾಣದ ಕೈಗಳಿಗೆ ಶರಣಾಗುತ್ತಿದ್ದರು. ಆ ಕಾಲದ ಜನರೇ ಹಾಗೆ, ಕಾಪಟ್ಯರಹಿತವಾದ ನಿರ್ಮಲಾಂತಃಕರಣದ ಬದುಕು. ಹಾಗಾಗಿ ಒಡಲಾಳದ ಕೂಗಿಗೆ ತುಳುವರು ನಂಬಿಕೊಂಡು ಬಂದ ದೈವಗಳು ಓಗೊಟ್ಟು ಬಂದು ಇಷ್ಟಾರ್ಥಗಳನ್ನು ಈಡೇರಿಸಿಕೊಡುತ್ತಿದ್ದರು ಎನ್ನುವುದು ಸತ್ಯ.

ಹೆಣ್ಣು ಸಂತತಿ ಕ್ಷೀಣಿಸಿದ ಕಾಲಘಟ್ಟದಲ್ಲಿ ಕುಟುಂಬ ನಾಗದೇವರನ್ನು ತೃಪ್ತಿಪಡಿಸಲು ನಾಗನ ಸೇವೆಗಾಗಿ ಮನೆತನದ ಆಸ್ತಿಯನ್ನು ಪರಭಾರೆ ಮಾಡಲೂ ಹಿಂಜರಿಯಲಾರರು. ಅಂದಿನ ದಿನಗಳಲ್ಲಿ ನಾಗನಿಗೆ ಹೆಚ್ಚೆಂದರೆ ಡಕ್ಕೆಬಲಿ (ಡಮರು ಸೇವೆ). ಇಂದು ಬದಲಾದ ಐಷಾರಾಮದ ಬದುಕಿನ ನಡೆಯಲ್ಲಿ ನಾಗನಿಗೆ ಆಶ್ಲೇಷಬಲಿಯಿಂದ ಹಿಡಿದು ಹದಿನಾರು ಗಂಟಿನ ದೊಡ್ಡ ನಾಗಮಂಡಲವು ವೈಭವದಿಂದ ನಡೆಯುವುದು. ಅದಕ್ಕಾಗಿ ಲಕ್ಷ, ಲಕ್ಷ ಹಣ ಪೋಲಾಗುವುದು. ಆದರೂ ಇದರ ಪರಿಸಮಾಪ್ತಿಯಲ್ಲಿ





ಸಲ್ಲುವ ಕುಡುತೆ ಹಾಲು ಮಾತ್ರ ನಾಗನ ಕಲ್ಲಿಗೆ. ಇವೆಲ್ಲದರ ಕೊನೆಯ ಆಶಯ ಸಂತತಿಯ ಉತ್ಪತ್ತಿ ಮತ್ತು ಅಭಿವೃದ್ಧಿಯೇ ಆಗಿರುವುದು. ಇಂದಿಗೂ ತುಳುನಾಡಿನಲ್ಲಿ ನಾಗನಿಗೆ ಸರಳ ರೀತಿಯ ಪೂಜೆ ನಡೆಯುವುದು. ಈ ನಾಡಿಗೆ ವಲಸೆ ಬಂದಿರುವ ವೈದಿಕರ ಪ್ರಭಾವದಿಂದಾಗಿ ನಾಗಪೂಜೆಯೂ ಅವರ ಪರಿವರ್ತಿಯಾಯಿತು.

ಮೂಲ ತುಳುವರಲ್ಲಿ ಜಾತಿಗೆ ಸಂಬಂಧಿಸಿ ಬರಿ/ಬಲಿಗಳೆಂಬ ಉಪನಾಮದಿಂದ ಗುರುತಿಸುವ ಪದ್ಧತಿ ಪೂರ್ವದಿಂದಲೂ ಇರುವುದು. ತಾಯಿ ಮೂಲದ ಎಲ್ಲ ಜಾತಿಗಳು ಒಂದೇ ಗುಂಪಿಗೆ ಸೇರಿದವರು ಎಂದು ತಿಳಿಯುವುದು. ಇದನ್ನು ಅಧ್ಯಯನವೂ ಸಮರ್ಥಿಸುವುದು.

ತುಳು ನಾಡಿಗೆ ಬಹಳ ಪೂರ್ವದಿಂದ ಬೇರೆ ಬೇರೆ ಮೂಲಗಳಿಂದ ಬೇರೆ ಬೇರೆ ಜನವರ್ಗದವರು ವಲಸೆ ಬಂದಿರುವುದು ತಿಳಿಯುವುದು. ಇವರಲ್ಲಿ ಬ್ರಾಹ್ಮಣರ ಅನೇಕ ಪಂಗಡಗಳು, ಮೊಘಲರು, ಜೈನರು, ಪೋರ್ಚುಗೀಸರು, ಡಚ್ಚರು, ಕ್ರೈಸ್ತರು, ಯಹೂದಿಗಳು, ಆಂಗ್ಲರು, ದೇಶದ ಇತರ ಭಾಗಗಳಿಂದ ಕೊಂಕಣಿಗಳ ಅನೇಕ ಪಂಗಡಗಳು (ಸಾರಸ್ವತರ ಅನೇಕ ಗುಂಪುಗಳು), ಮರಾಠಿಗರ ಅನೇಕ ಪಂಗಡಗಳು, ಬೌದ್ಧರು ಮೊದಲಾದವರು ಸೇರಿರುವರು. ಇಲ್ಲಿ ನಮೂದಿಸಿರುವ ಕೆಲವು ಪಂಗಡಗಳ ವಲಸೆಗಳು ಕೇರಳ ರಾಜ್ಯಕ್ಕೂ ಅನ್ವಯಿಸುವುದು. ಈ ವರ್ಗದ ವಲಸೆ ಬಂದವರಲ್ಲಿ ಬಹುತೇಕರು ಕರಾವಳಿಯ ಭೌಗೋಳಿಕ ವಾತಾವರಣ, ಮಳೆ–ಬೆಳೆ, ಪರಿಸರದ ಜನರ ಬದುಕಿನ ರೀತಿ–ನೀತಿ, ಉದ್ಯೋಗ ವ್ಯಾಪಾರ ಈ ರೀತಿಯಾಗಿ ಒಟ್ಟು ವಸ್ತು ವಿಚಾರಗಳನ್ನು ಪರಿಗಣನೆಗೆ ತಂದುಕೊಂಡರು. ಈ ಪ್ರದೇಶವು ಬದುಕಲು ನೆಮ್ಮದಿಯ ತಾಣವೆಂದು ತಿಳಿದು ತಮಗೊಂದು ಶಾಶ್ವತ ನೆಲೆಯಾಗಿ ಆಯ್ದುಕೊಂಡರು. ಇಂತಹ ಜನ ಮುಂದೊಂದು ದಿನ ಮೂಲ ತುಳುವರ ಜೊತೆ ಸಂವಹನ ಭಾಷೆಯಾಗಿ ತುಳುವನ್ನೇ ಆರಿಸಿಕೊಳ್ಳುವುದು ಅನಿವಾರ್ಯವಾಯಿತು.

ಈ ದೃಷ್ಟಿಯಲ್ಲಿ ವಿವೇಚಿಸುವುದಿದ್ದರೆ ವಲಸೆ ಬಂದವರಿಂದ ತುಳುವಿಗೆ ಎಂದೆಂದೂ ಮರೆಯಲಾಗದ ದಾಖಲಾರ್ಹ ಕೊಡುಗೆ ದೊರಕಿರುವುದು ಇಂದು ಇತಿಹಾಸ. ಆದರೂ ವಲಸೆ ಬಂದವರು ಸಂಕುಚಿತ ಭಾವದಿಂದ ವರ್ತಿಸುತ್ತ ತಾವು ತಂದ ವಿದ್ಯೆಯನ್ನು ಇತರರ ಜೊತೆ ಹಂಚಿಕೊಳ್ಳಲಿಲ್ಲ. ಇದಕ್ಕೆ ಅಪವಾದವಾಗಿ ವಿದೇಶಿ ಮೂಲದಿಂದ ಈ ದೇಶಕ್ಕೆ ವಲಸೆ ಬಂದು ಕರಾವಳಿಯುದ್ಧಕ್ಕೂ ಸಾಕಷ್ಟು ಕಾರ್ಯ ಚಟುವಟಿಕೆಯನ್ನು ನಡೆಸಿದ ಕ್ರೈಸ್ತ ಮತ ಪ್ರಚಾರಕರು (ಬಾಸೆಲ್ ಮಿಶನ್ ಮೊದಲಾಗಿ) ತುಳುಭೂಮಿಯ ಜನರು ಓದು ಬರಹ ಕಲಿಯುವಲ್ಲಿ ಮಹತ್ತರ ಕೊಡುಗೆ ನೀಡಿರುವುದನ್ನು ನಾವು ಸ್ಮರಿಸಲೇಬೇಕು.

ಅವರ ಔದಾರ್ಯದ ದೆಸೆಯಿಂದ ಎಲ್ಲ ತುಳು ಜನ ಜಾತಿ-ಮತ-ಮಡಿ-ಮೈಲಿಗೆ ಲಿಂಗ ಬೇಧ ತೊರೆದು ಸಮಾನ ಸ್ಕಂದರಾಗಿ ವಿದ್ಯಾಮಂದಿರ ಪ್ರವೇಶಿಸಿ ಓದು ಬರಹ ಕಲಿಯುವಂತಾಯಿತು. ಇದು ಇತಿಹಾಸದಲ್ಲಿ ದಾಖಲಾಯಿತು ಕೂಡಾ. ಈ ಮಿಶನರಿಗಳ ಅನೇಕ ವಿದ್ವಾಂಸರು ಡಾ. ಕಿಟ್ಟೆಲ್, ಡಾ. ಬರ್ನೆಲ್, ಮ್ಯಾನರ್, ಮೊಂಗ್ಲಿನ್ ಮೊದಲಾಗಿ ತುಳು ನಿಘಂಟು ರಚಿಸಿ, ತುಳು ಜಾನಪದ-ದೈವಾರಾಧನೆಗೆ ಸಂಬಂಧಿಸಿ ಅನೇಕ ಕೃತಿಗಳನ್ನು ರಚಿಸಿ ಆ ಮೂಲಕ ತುಳು ಭಾಷೆ ಸಂಸ್ಕೃತಿ ಮತ್ತು ಸಾಹಿತ್ಯಕ್ಕೆ ಅಪೂರ್ವ ಕೊಡುಗೆ ನೀಡಿ ಉಪಕರಿಸಿರುವರು.

ಸರಿಸುಮಾರು ಒಂದೂವರೆ ಶತಮಾನದ ಪೂರ್ವದಲ್ಲಿ ಕೇರಳ ರಾಜ್ಯದಲ್ಲಿ ಹಿಂದುಳಿದ ಸಮಾಜವೆಂದು ಪರಿಗಣಿಸಲ್ಪಟ್ಟ ಈಳವರ ವಂಶದಲ್ಲಿ ಜನಿಸಿ, ಮುಂದೆ ಅಸಾಮಾನ್ಯ ವ್ಯಕ್ತಿತ್ವ ಮೆರೆದವರು ನಾರಾಯಣ ಗುರುಗಳೆಂಬ ಸಂತರು. ಆ ಕಾಲಘಟ್ಟದಲ್ಲಿ ಕೇರಳ ರಾಜ್ಯದಲ್ಲಿ ಪ್ರಚಲಿತವಿದ್ದ ಅನೇಕ ಅನಿಷ್ಟ ಪದ್ಧತಿಗಳನ್ನು ನಿರ್ಮೂಲನಗೊಳಿಸಿದವರು ನಾರಾಯಣ ಗುರುಗಳು. ದುಡಿದುಣ್ಣುವ

ಸಾಮಾನ್ಯ ಜನರ ಬದುಕಿನಲ್ಲಿ ಉತ್ಕೃಷ್ಟತೆಯನ್ನು ನೆಲೆಗೊಳಿದರು. ಅವರ ಸರ್ವಕಾಲಿನ ಸ್ವೀಕೃತಿ ಸಂದೇಶಗಳಾದ 'ಒಂದೇ ಜಾತಿ, ಒಂದೇ ಮತ- ಜಗತ್ತಿಗೆಲ್ಲ ಒಬ್ಬನೇ ದೇವರು' ಮೂಲಕ ಇಡೀ ಕೇರಳ ರಾಜ್ಯದಲ್ಲಿ ಸಾಮಾಜಿಕ ಸುಧಾರಕರಾಗಿ ಆದರ್ಶ ಮೆರೆದರು.

ಕರ್ನಾಟಕ ಮತ್ತು ಕೇರಳ ರಾಜ್ಯದಲ್ಲಿ ನಡೆದು ಬಂದಿರುವಂತೆ ಕೂಡುಕುಟುಂಬ ಮತ್ತು ಸಮಾಜದಲ್ಲಿ ಹೆಣ್ಣು ಮಗಳನ್ನು ಅತ್ಯುತ್ಕೃಷ್ಟ ಗೌರವದಿಂದ ಕಾಣುತ್ತಿದ್ದುದು ಸರ್ವವಿಧಿತ. ಕುಟುಂಬದಲ್ಲಿ ಮೈನೆರೆತ ಹೆಣ್ಣು ಮಗಳನ್ನು ಜೊತೆಗಾರರೊಬ್ಬರಿಲ್ಲದೆ ಹೊರಗೆಲ್ಲೂ ಕಳುಹಿಸುವಂತಿಲ್ಲ. ಈ ನಿಷಿದ್ಧ ಆಕೆಯ ವಿವಾಹದವರೆಗೂ ಇರುತ್ತಿತ್ತು. ಕೂಡುಕುಟುಂಬದ ಹೆಣ್ಣುಮಗಳು ತಿಳಿದೋ, ತಿಳಿಯದೆಯೋ ದಾರಿತಪ್ಪಿ ನಡೆದರೆ, ಅಂತಹ ಮನೆಯ ಯಜಮಾನನು ಸಮಾಜದಲ್ಲಿ ಗೌರವ ಕಾಪಾಡಲು ಆತ್ಮಹತ್ಯೆಗೆ ಶರಣಾಗುವ ಕಠೋರ ಶಿಕ್ಷೆ ಅನುಭವಿಸಬೇಕಿತ್ತು.

ಭಿನ್ನ ಭಿನ್ನ ಭಂಗಿಯ ದೇವರ, ದೈವಗಳ ಮುಖ ಮೂರ್ತಿಗಳು, ಉರುಗಳು ಈ ದೇಶದ ಜನಜೀವನದಲ್ಲಿ ಆಗಿರುವ ಆರಾಧನೆಯ ನಡೆಗಳನ್ನು ಬಿಂಬಿಸುತ್ತಿವೆ.

ಪಂಚದ್ರಾವಿಡ ಭಾಷೆಗಳನ್ನಾಡುವ ರಾಜ್ಯಗಳಾದ ಆಂಧ್ರ, ಕರ್ನಾಟಕ, ತಮಿಳುನಾಡು, ಕೇರಳ ಮತ್ತು ತುಳುನಾಡುಗಳು ಜಾನಪದ, ಆಚಾರ-ವಿಚಾರ, ಆರಾಧನೆಯಲ್ಲಿ ಬಹಳಷ್ಟು ಹೋಲಿಕೆ ಮತ್ತು ಸಮಾನತೆಯನ್ನು ಪಡೆದಿರುವುದು ತಿಳಿಯುವುದು. ಬಹಳ ಹಿಂದಿನ ಕಾಲದಿಂದಲೂ ಈ ಪ್ರದೇಶಗಳಲ್ಲಿ ಸಾಂಸ್ಕೃತಿಕ ಆದಾನ-ಪ್ರಧಾನವೂ ನಡೆಯುತ್ತಿತ್ತು. ತುಳುನಾಡಿಗೆ ಕೇರಳದ ನಾಯರಿ(ನಾನಾಯರ್)ಗಳೆಂಬ ಜನರು ಕೆಲವು ಪಾಳೆಯಗಾರರ ರಾಜ್ಯರಕ್ಷಣೆಗೆ ತಮ್ಮ ಕಿರು ರಕ್ಷಣಾ ಬಲದ (Security Service) ಸೇವೆಯನ್ನು ಒದಗಿಸುತ್ತಿದ್ದರು. ತುಳು ನಾಡಿನಾದ್ಯಂತ ಗರಡಿ

ಗೋದೆಗಳೆಂಬ ಅಂಗಸಾಧನೆ ಮಾಡುವ ಎಲ್ಲ ಶಾಲೆಗಳಲ್ಲಿ ಕೇರಳ ರಾಜ್ಯದ ಗುರುಗಳು ಬಂದು ಕಳರಿ ಮೊದಲಾಗಿ ಮಲ್ಲವಿದ್ಯೆಯ ವಿವಿಧ ಪಟ್ಟುಗಳನ್ನು ಕಲಿಸುತ್ತಿದ್ದರು. ಅದೇ ರೀತಿ ತುಳುನಾಡಿನಿಂದಲೂ ಕೇರಳಕ್ಕೆ ವಿದ್ಯಾಗುರುಗಳು ಹೋಗಿ ಸೇವೆ ಸಲ್ಲಿಸಿರುವುದಕ್ಕೆ ಪುರಾವೆಗಳು ಇತಿಹಾಸದಲ್ಲಿ ಇವೆ.

ಉಡುಪಿ, ಕೊಲ್ಲೂರು, ಸುಬ್ರಹ್ಮಣ್ಯ ಮೊದಲಾದ ದೇವಾಲಯಗಳಿಗೆ ಪ್ರಾಚೀನ ಕಾಲದಿಂದಲೂ ಕೇರಳದ ಭಕ್ತರ ದೊಡ್ಡ ಗುಂಪು ಬಂದು ಸೇವೆ ಮಾಡುತ್ತಿದ್ದರು. ಅದೇ ರೀತಿ ಗುರುವಾಯೂರು, ಶಬರಿಮಲೆ ಮೊದಲಾಗಿ ಕೇರಳದ ಪ್ರಖ್ಯಾತ ದೇವಾಲಯಗಳು ತುಳುನಾಡಿನಿಂದ ಅಸಂಖ್ಯ ಭಕ್ತರನ್ನು ವರ್ಷವಿಡೀ ಆಕರ್ಷಿಸುತ್ತಿದ್ದುವು. ಉಡುಪಿ ಮೊದಲಾಗಿ ಆ ಕಾಲದ ದಕ್ಷಿಣ ಕನ್ನಡ ಜಿಲ್ಲೆಯ (ತುಳುನಾಡು) ಪ್ರಸಿದ್ಧ ದೇವಾಲಯಗಳ ಸುತ್ತಮುತ್ತ ಭಕ್ತ ಜನರ ಧಾರ್ಮಿಕ ಅವಶ್ಯಕತೆಗಳನ್ನು ಪೂರೈಸಲು ಲೋಹಶಿಲ್ಪಿಗಳ ಕೊರತೆ ಕಾಡುತ್ತಿದ್ದುದು ಸ್ವಾಭಾವಿಕ. ತುಳು ಭಾಷಿಕರಿಂದ ತುಂಬಿಕೊಂಡಿದ್ದ ತುಳುನಾಡಿನಲ್ಲಿ ದೈವಾರಾಧನೆಯೆಂಬ ವಿಶಿಷ್ಟ ಪೂಜಾ ಪರಿಕ್ರಮ ಮತ್ತು ಆರಾಧನಾ ಪದ್ಧತಿ ಪ್ರಚಲಿತವಿತ್ತು.

ಕಳೆದೊಂದು ಶತಮಾನದಿಂದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿದ್ಯಾಕ್ರಾಂತಿಯಾಗಿ ಜನ ಎಚ್ಚೆತ್ತುಕೊಂಡುದು ನಿಜ. ಅದರ ಪರಿಣಾಮವಾಗಿ ಔದ್ಯೋಗಿಕ ಕ್ರಾಂತಿಯು ಕೂಡಾ ನಡೆಯಿತು. ಜನರು ಬದುಕಿನ ಆರ್ಥಿಕ ಅನುಕೂಲತೆಯಿಂದ ಸಾಂಸ್ಕೃತಿಕ ಉನ್ನತಿಯನ್ನು ಕೂಡಾ ಪಡೆದರು. ತಮ್ಮ ವಾಸ್ತವ್ಯದಲ್ಲಿ ಅಭೂತಪೂರ್ವ ಸುಧಾರಣೆ ಮಾಡಿಕೊಂಡ ತುಳುವ ಬಾಂಧವರು ತಾವು ನಂಬಿಕೊಂಡು ಬಂದಿರುವ ದೈವಸ್ಥಾನಗಳಲ್ಲಿ ಕೂಡಾ ಗಮನಾರ್ಹ ಬದಲಾವಣೆ ಮಾಡುವಲ್ಲಿ ಕೃತಕೃತ್ಯರಾದುದು ಸಹಜ ಮತ್ತು ಸ್ವಾಭಾವಿಕ. ಹಾಗಾಗಿ ಆ ಕಾಲಘಟ್ಟದಲ್ಲಿ ತುಳುನಾಡಿನಲ್ಲಿ





ವಿಶೇಷವಾಗಿ ಉಡುಪಿ, ಧರ್ಮಸ್ಥಳ, ಕಟೀಲು, ಬಪ್ಪನಾಡು, ಸುಬ್ರಹ್ಮಣ್ಯ, ಕೊಲ್ಲೂರು ಮೊದಲಾದ ದೇವಸ್ಥಾನಗಳು ಮತ್ತು ಪರಿಸರದ ದೈವಸ್ಥಾನಗಳಲ್ಲಿ ವಿವಿಧ ಮುಖ ಮೂರ್ತಿಗಳು ಮತ್ತಿತರ ಪರಿಕರಗಳ ಅವಶ್ಯಕತೆ ತೋರಿ ಬಂದುದು ಸಹಜ. ಒಂದು ವಿಚಾರವನ್ನು ಇಲ್ಲಿ ನಿರ್ಭಾವುಕವಾಗಿ ವಿಮರ್ಶಿಸುವುದಿದ್ದರೆ ಲೋಹ ಶಿಲ್ಪದಂತಹ ಕಲಾನೈಪುಣ್ಯತೆಯಲ್ಲಿ ತುಳುವರಿಗಿಂತ ಕೇರಳೀಯ ಬಂಧುಗಳು ನಿಸ್ಸೀಮರು ಎಂಬುದರಲ್ಲಿ ಎರಡು ಮಾತಿಲ್ಲ.

ಕಲೆಗಳನ್ನು ಉಪಯೋಗಿಸಿ ಅದ್ಭುತ ರೀತಿಯಲ್ಲಿ ಸೋಮೇಶ್ವರ, ಮಹಾವೀರ, ಸಾವಿರ ಕಂಬದ ಬಸದಿ ಮೊದಲಾಗಿ ವಿಶ್ವಮಾನ್ಯ ಕೃತಿಗಳನ್ನು ರಚಿಸುವ ಶಿಲ್ಪಿಗಳು ತುಳುನಾಡಿನಲ್ಲಿ ಹೇರಳವಾಗಿ ಇದ್ದರು ಸಹಜ. ಹಾಗಾಗಿ ಮಧ್ಯಕಾಲದಲ್ಲಿ ಕೇರಳದಲ್ಲಿ ಜನಿಸಿ ಬಂದು ಅಲ್ಲೇ ಬಾಲ್ಯವನ್ನು ಕಳೆದ ಪ್ರಖ್ಯಾತ ಲೋಹಶಿಲ್ಪಿಗಳ ಸಾಲಿನಲ್ಲಿ ಮನ್ನಣೆ ಪಡೆದಿರುವ ಶಿಲ್ಪಿ ಟಿ. ರಾಘವ ಆಚಾರ್ಯರ ಕುಟುಂಬದಂತೆ ಅನೇಕ ಶಿಲ್ಪಿಗಳ ಕುಟುಂಬಗಳು ತುಳುನಾಡಿನತ್ತ ಪಯಣ ಬೆಳೆಸಿರುವುದು ಸಮಯೋಚಿತವೂ ಆಗಿರುವುದು.

*



# ಆಧುನಿಕ ಲೋಹಶಿಲ್ಪದ ಜನಕ
# ಟಿ. ರಾಘವ ಆಚಾರ್ಯ

ಯಾವುದೇ ವ್ಯಕ್ತಿ ತನ್ನ ಸಾಮಾನ್ಯ ಬದುಕಿನ ಸ್ತರದಿಂದ ಎದ್ದು ನಿಂತು ಅಸಾಮಾನ್ಯ ಸಾಧನೆಗೆ ತನ್ನನ್ನು ತೆರೆದುಕೊಳ್ಳಬೇಕಿದ್ದರೆ, ಆತನ ಪರಿಶ್ರಮ ಮತ್ತು ಪೂರಕವಾಗಿ ಆತನು ನಂಬಿಕೊಂಡು, ಆರಾಧಿಸಿಕೊಂಡು ಬರುತ್ತಿರುವ ದೈವದೇವರುಗಳ ಅನುಗ್ರಹ ಕಾರಣ ಎಂಬುದಕ್ಕೆ ಇಂದು ರಾಷ್ಟ್ರಮಾನ್ಯ ಲೋಹಶಿಲ್ಪಿ ತೋಟಿನಕ್ಕರ ರಾಘವ ಆಚಾರ್ಯರೇ ಸಾಕ್ಷಿ. ಅವರ ಅಹೋರಾತ್ರಿ ವೃತ್ತಿ ಪರಿಶ್ರಮದ ಫಲವಾಗಿ ದೈವದ ಒಲುಮೆ ಒದಗಿ ಬಂದಿರುವುದು. ಅವರು ಇಂದು ಆಧುನಿಕ ಲೋಹಶಿಲ್ಪ ಕಲೆಯಲ್ಲಿ ಅಗ್ರಮಾನ್ಯರೆನಿಸಿ ಕೊಂಡಿರುವುದಂತೂ ಸತ್ಯ.

## ಬಾಲ್ಯ

ಟಿ. ರಾಘವ ಆಚಾರ್ಯರು ಕೇರಳದ ಪಯ್ಯನೂರಿನಲ್ಲಿರುವ ಕೋರಂ ಗ್ರಾಮದಲ್ಲಿ 4-11-1931ರಲ್ಲಿ ಜನಿಸಿದರು. ತೀರ್ಥರೂಪರು ಟಿ. ಕರಿಂಬ ಆಚಾರ್ಯ. ತಾಯಿ ಚೆರಿಯಮ್ಮ. ಬಾಲಕ ರಾಘವನಿಗೆ

ಇಬ್ಬರು ಅಣ್ಣಂದಿರು, ಒಬ್ಬಳು ತಂಗಿ. ಭಾರತದ ಇತಿಹಾಸವನ್ನು ಕೆಣಕಿದರೆ ನಮಗೆ ತಿಳಿಯುವ ಸತ್ಯವೆಂದರೆ ಕೇರಳ ರಾಜ್ಯದ ಪಯ್ಯನೂರು ಮತ್ತು ಕರ್ನಾಟಕದ ಉಡುಪಿ ಲೋಹ ಶಿಲ್ಪಕಲೆಗೆ ಹೆಸರಾಂತ ಕೇಂದ್ರವಾಗಿರುವುದು. ಬಾಲಕ ರಾಘವನು ಸ್ಥಳೀಯ ವಿದ್ಯಾಸಂಸ್ಥೆಯಲ್ಲಿ ತನ್ನ ಪ್ರಾಥಮಿಕ ಹಂತದ ವಿದ್ಯಾಭ್ಯಾಸವನ್ನು ಪೂರೈಸಿದನು. ಕುಟುಂಬ ಮೂಲದಿಂದ ಬಂದಿರುವ ಅನುವಂಶೀಯ ಶಿಲ್ಪಕಲಾ ಜೀವನಕ್ಕೆ ರಾಘವನು ಹೊಂದಿಕೊಳ್ಳುವುದು ಅನಿವಾರ್ಯವಾಗಿತ್ತು. ಆ ಕಾಲದಲ್ಲಿ ನಮ್ಮ ದೇಶ ಆಧುನಿಕತೆಗೆ ಅಷ್ಟೊಂದು ತೆರೆದುಕೊಂಡಿರಲಿಲ್ಲ. ಮೇಲಾಗಿ ಗ್ರಾಮೀಣ ಪ್ರದೇಶದ ಜನ ಮಕ್ಕಳನ್ನು ನಗರದಲ್ಲಿ ವಿದ್ಯಾಭ್ಯಾಸಕ್ಕೆ ಕಳುಹಿಸುವುದಕ್ಕೂ ಹಿಂಜರಿಯುತ್ತಿದ್ದರು. ಸಾಮಾನ್ಯವಾಗಿ ದುಡಿದು ಬದುಕುವ ಜನ ವರ್ಗದ ಆರ್ಥಿಕ ಸಂಪನ್ಮೂಲವೂ ಇವೆಲ್ಲದಕ್ಕೆ ಪೂರಕವಾಗಿರಲಿಲ್ಲ. ಏನಿದ್ದರೂ ಪೂರ್ವ ಹಿರಿಯರ ಕಾಲದಿಂದ ಬಂದಿರುವ ಗದ್ದೆ ಬೇಸಾಯ, ತೋಟಗಾರಿಕೆ, ಮೀನು ಹಿಡಿಯುವುದು, ವ್ಯಾಪಾರ, ಗುಡಿ ಕೈಗಾರಿಕೆ ಇತ್ಯಾದಿಗಳನ್ನು ಕಲಿತು ಕಿರಿಯರು ಹಿರಿಯರಿಗೆ ಸಹಾಯಕರಾಗಿ ಬದುಕಬೇಕೆನ್ನುವುದೇ ಆ ಕಾಲದ ವೃತ್ತಿಧರ್ಮವೂ ಆಗಿತ್ತು.

ತಂದೆಯವರ ಮತ್ತು ಅಣ್ಣಂದಿರ ಹಿರಿತನದ ಮಾರ್ಗದರ್ಶನದಲ್ಲಿ ಕುಲಕಸುಬಿನ ಒಳಗು ಹೊರಗನ್ನು ಬಾಲಕನು ಅಭ್ಯಸಿಸತೊಡಗಿದನು. ಕೇರಳದ ಕಣ್ಣೂರಿನಲ್ಲಿ ಲೋಹಶಿಲ್ಪದ ಕಾರ್ಯದಲ್ಲಿ ನಿರತರಾಗಿದ್ದ ಹಿರಿಯರ ಜೊತೆ ರಾಘವನೂ ಸೇರಿಕೊಂಡು ಮೊದಲ ಹಂತದ ಕೆಲಸಗಳನ್ನು ನಿಷ್ಠೆಯಿಂದ ಅಭ್ಯಾಸ ಮಾಡತೊಡಗಿದರು. ಆ ಕಾಲದಿಂದಲ್ಲೂ ಕೇರಳ ಮತ್ತು ಕರ್ನಾಟಕ ರಾಜ್ಯದಲ್ಲಿ ಶಿಲ್ಪಕಲೆ-ಕಳರಿ-ಮಲ್ಲವಿದ್ಯೆ ಮೊದಲಾದ ಮಾಧ್ಯಮಗಳಲ್ಲಿ ಆದಾನ ಪ್ರದಾನ ನಡೆಯುತ್ತಿದ್ದುದು ತಿಳಿಯುವುದು.

## ವೃತ್ತಿ ಜೀವನದತ್ತ ವಲಸೆ

ಕರಾವಳಿ ಕರ್ನಾಟಕದ ತುಳುನಾಡು ವಿಶಿಷ್ಟವೂ ವಿಭಿನ್ನವೂ ಆದ ಸಂಸ್ಕೃತಿಯ ಜನರ ಆವಾಸಸ್ಥಾನವಾಗಿತ್ತು. ಕೇರಳ ರಾಜ್ಯದಂತೆ ಪುರಾತನ ಹಿಂದೂ ದೇವಾಲಯಗಳು ತುಳುನಾಡಿನ ಧಾರ್ಮಿಕ ಪಾವಿತ್ರ್ಯತೆಯನ್ನು ಎತ್ತರದಲ್ಲಿ ನಿಲ್ಲಿಸಿದ್ದುವು. ಜೊತೆಗೆ ತುಳುನಾಡಿನ ಮೂಲ ನಿವಾಸಿಗಳು ದೈವಗಳನ್ನು ತಮ್ಮ ಆರಾಧ್ಯ ಶಕ್ತಿಗಳಾಗಿ ಪೂಜಿಸಿಕೊಂಡಿದ್ದರು. ತುಳುನಾಡಿನಂತೆಯೇ ಉತ್ತರ ಕೇರಳದಲ್ಲಿ ದೈವಾರಾಧನೆಯನ್ನು 'ತೆಯ್ಯಂ' ಎಂಬ ಆರಾಧನಾ ರೂಪದಲ್ಲಿ ಪೂಜಿಸಿಕೊಂಡು ಬರುತ್ತಿರುವುದನ್ನು ನಾವು ಗಮನಿಸುತ್ತೇವೆ. ತುಳು ಭಾಷಿಕರ ಸಂಸ್ಕೃತಿಯನ್ನು ಅಭ್ಯಸಿಸಿದ ಜಾನಪದ ಪಂಡಿತರ ಅಭಿಮತದಂತೆ ಸಾಂಸ್ಕೃತಿಕ ತುಳುನಾಡು ದಕ್ಷಿಣದ ರಾಮೇಶ್ವರದಿಂದ ಉತ್ತರದ ಅಂಕೋಲೆಯವರೆಗೆ ಹಬ್ಬಿಕೊಂಡಿತ್ತು ಎನ್ನುವುದು ತಿಳಿಯುವುದು. ಆದುದರಿಂದ ಈ ಪ್ರದೇಶದ ಜನ ಪರಸ್ಪರ ಕೊಡುಕೊಳ್ಳುವಿಕೆಯಲ್ಲಿ ತಾವು ತೊಡಗಿಸಿಕೊಂಡಿರುವುದನ್ನು ನಾವು ತಿಳಿಯುತ್ತೇವೆ. ಕರಾವಳಿ ಕರ್ನಾಟಕದಲ್ಲಿ ಲೋಹಶಿಲ್ಪದ ವಿವಿಧ ವಿನ್ಯಾಸದ ಪಾತ್ರೆಗಳಿಗೆ ಮತ್ತು ದೈವಗಳ ಮುಖವಾಡ ಮೊದಲಾದ ಪರಿಕರಗಳಿಗೆ ಹೆಚ್ಚಿನ ಬೇಡಿಕೆಯಿದ್ದ ಕಾಲವದು.

ಟಿ. ರಾಘವ ಆಚಾರ್ಯರು ಹುಟ್ಟೂರನ್ನು ಬಿಟ್ಟು ದೂರದ ಉಡುಪಿಗೆ ವಲಸೆ ಬರಲು ಇದು ಒಂದು ಮುಖ್ಯ ಉದ್ದೇಶ ಎನ್ನಲಡ್ಡಿಯಿಲ್ಲ. 17ನೇ ವಯಸ್ಸಿಗೆ ಅಣ್ಣಂದಿರ ಜೊತೆ ಉತ್ತರಾಭಿಮುಖವಾಗಿರುವ ಗೀತಾಚಾರ್ಯನ ನೆಲೆವೀಡು ಕಡೆಗೋಲು ಕೃಷ್ಣನ ಸನ್ನಿಧಾನಕ್ಕೆ ವಲಸೆ ಬಂದರು. ಹಿರಿಯಣ್ಣ ರಾಮಾಚಾರ್ಯರ ಜೊತೆ ಉಡುಪಿಗೆ ಸಮೀಪದ ಅಂಬಾಗಿಲು ಎಂಬ ಪುಟ್ಟ ಹಳ್ಳಿ ಮುಂದೊಂದು ದಿನ ಮಹಾನ್ ಕಲಾವಿದನಾಗಿ ಮೆರೆದ ಟಿ. ರಾಘವ ಆಚಾರ್ಯರಿಗೆ ತಾತ್ಕಾಲಿಕ ನೆಲೆಯನ್ನೊದಗಿಸಿತು

ಎಂಬುದು ಸತ್ಯ. 'ದೇಶ ಪರಿಚಯವಿಲ್ಲ, ದೇಹದೊಳು ಬಲವಿಲ್ಲ' ಎಂಬ ಪ್ರಾಜ್ಞ ವಚನಕ್ಕನುಸಾರವಾಗಿ ತುಳು ಕನ್ನಡ ಭಾಷಿಕರ ಊರು ಉಡುಪಿಯ ಏನೇನೂ ಪರಿಚಯವಿಲ್ಲದ ಮಲೆಯಾಳಿ ಭಾಷೆಯ ಟಿ. ರಾಘವ ಆಚಾರ್ಯರು ಕಕ್ಕಾಬಿಕ್ಕಿಯಾದುದಂತೂ ಸಹಜ.

ಆ ಕಾಲದಲ್ಲಿ ಸುತ್ತಣ ಹತ್ತೂರಿಗೆ ಸಂಬಂಧಿಸಿದಂತೆ ಉಡುಪಿಯ ಕೇಂದ್ರ ಮಾರುಕಟ್ಟೆಯಲ್ಲಿ ಕಲ್ಮಂಜೆ ವ್ಯಾಸಾಚಾರ್ಯರು, ಐರೋಡಿ ರಾಧಾಕೃಷ್ಣ ಪೈ ಮತ್ತು ಕೋಲ್ಕಾರ್ ರಾಮಪ್ರಭು ಮೊದಲಾಗಿ ಬೆರಳೆಣಿಕೆಯ ಪ್ರಸಿದ್ಧರೂ ಆಗಿದ್ದ ಹಿರಿಯ ವ್ಯಾಪಾರಿಗಳು ಎಲ್ಲ ತರದ ಪೂಜಾ ಸಾಮಾಗ್ರಿಗಳ ವ್ಯಾಪಾರ ನಡೆಸುತ್ತಿದ್ದರು. ಶ್ರೀ ಕೃಷ್ಣ ದೇವಳದ ಸುತ್ತ ನಾಲ್ಕು ಬೀದಿಯಲ್ಲಿ ಪೂಜಾ ಪರಿಕರಗಳ ಹೆಸರಾಂತ ವ್ಯಾಪಾರಿಗಳು ಇವರು. ಆಚಾರ್ಯ ಮಧ್ವರಿಂದ ಸ್ಥಾಪಿಸಲ್ಪಟ್ಟ ಅಷ್ಟಮಠಗಳ ಯತಿಗಳು ಎರಡು ವರ್ಷ ಸರತಿಯಂತೆ ಶ್ರೀ ಕೃಷ್ಣನಿಗೆ ಪೂಜೆ ಮಾಡುವ ಸಂದರ್ಭದಲ್ಲಿ ನಡೆಯುವ ಪರ್ಯಾಯೋತ್ಸವಕ್ಕೆ ದೇಶದಾದ್ಯಂತ ಉಡುಪಿಗೆ ಭಕ್ತ ಜನಸ್ತೋಮ ಹರಿದು ಬರುವುದೇ ಒಂದು ದೊಡ್ಡ ಸಂಭ್ರಮ. ದೂರದ ಊರುಗಳಿಂದ ವರ್ಷದ ಬೇರೆ ಬೇರೆ ಹಬ್ಬದುತ್ಸವದ ಸಂದರ್ಭ ಉಡುಪಿಗೆ ಬರುವ ಶ್ರೀ ಕೃಷ್ಣ ಮತ್ತು ಸಮೂಹ ದೇವರ ದರ್ಶನಾಕಾಂಕ್ಷಿಗಳಿಗೆ ಲೋಹ ಶಿಲ್ಪದ ವಿನ್ಯಾಸಭರಿತ ಸಾಮಾಗ್ರಿಗಳನ್ನು ಪೂರೈಸುವಲ್ಲಿ ಈ ವ್ಯಾಪಾರಿ ಮಳಿಗೆಗಳು ಪ್ರಮುಖ ಪಾತ್ರ ವಹಿಸುತ್ತಿದ್ದವು.

ರಾಘವಾರ್ಚಾಯರ ಅಣ್ಣ ಆ ಕಾಲದ ಗಿರಾಕಿಗಳ ಅವಶ್ಯಕತೆಗಳಾದ ಎಲ್ಲ ವಿಧದ ಕಂಚುಲೋಹ, ಪಂಚಲೋಹ, ಹಿತ್ತಾಳೆಯ ಪೂಜಾ ಸಾಮಾಗ್ರಿಗಳಾದ ನೀಲಾಂಜನ, (ಕಾಲುದೀಪ), ತೂಗು ದೀಪಗಳು (ಸರ ದೀಪಗಳು), ಕೂಚಿ (ಹೂಜಿ), ಉರುಳಿಗಳು, ದೇವರ ವಿವಿಧ ವಿನ್ಯಾಸ ಮತ್ತು ಗಾತ್ರದ ಮೂರ್ತಿಗಳು, ದೀಪಸ್ತಂಭಗಳು, ಪಾಣಿಪೀಠಗಳು, ದೇವಸ್ಥಾನಗಳ

ಬಾಗಿಲು ಚೌಕಟ್ಟಿಗೆ (ದಾರಂದ) ಹೊದಿಸಲು ಅವಶ್ಯವಿರುವ ಹಿತ್ತಾಳೆ, ಬೆಳ್ಳಿಯ ಕವಚಗಳು - ಈ ರೀತಿಯಾಗಿ ಎಲ್ಲ ಸಾಮಾಗ್ರಿಗಳನ್ನು ಪೂರೈಸುತ್ತಿದ್ದರು.

ಟಿ. ರಾಘವ ಆಚಾರ್ಯರ ಗುಂಪು ಒಂದೆರಡು ವರ್ಷ ತಮ್ಮ ಅಂಬಾಗಿಲಿನ (ಊರು) ಬದುಕು ಕಳೆದ ಬಳಿಕ ಉಡುಪಿಯಲ್ಲಿ ಕೆಲವು ವರ್ಷಗಳ ಕಾಲ ಕಡಿಯಾಳಿ ಸಮೀಪ ತಮ್ಮ ಕಾರ್ಯಾಗಾರವನ್ನು ನಿರ್ಮಿಸಿಕೊಂಡು ಕೆಲಸ ನಡೆಸತೊಡಗಿದರು.

ಅದು ಸಮಾಜ ಆಧುನಿಕ ವಿದ್ಯಾಭ್ಯಾಸಕ್ಕೆ, ತಾಂತ್ರಿಕತೆಗೆ, ಹೊಸ ಹೊಸ ಅವಿಷ್ಕಾರಕ್ಕೆ ತೆರೆದುಕೊಳ್ಳುವ ಕಾಲಘಟ್ಟ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯು ಹೆಚ್ಚು ಹೆಚ್ಚು ವಿದ್ಯಾಸಂಸ್ಥೆಗಳನ್ನು ಹೊಂದುವಂತಾಯಿತು. ಇದು ಮಣಿಪಾಲದಲ್ಲಿ ಪದ್ಮಶ್ರೀ ಡಾ। ಮಾಧವ ಪೈಯವರು ಕೈಗೊಂಡ ಕ್ರಾಂತಿಕಾರಿ ಧೋರಣೆಯ ಫಲ ಎನ್ನಲಡ್ಡಿಯಿಲ್ಲ. ಎಲ್ಲ ರೀತಿಯ ಕಾಲೇಜು ಮಟ್ಟದ ಶಿಕ್ಷಣವು ತುಳುನಾಡಿನ ಮನೆಯಂಗಳದಲ್ಲಿ ದೊರೆಯುವಂತಾಯಿತು ಎಂದು ಒತ್ತಿ ಹೇಳಲೇಬೇಕು. ಹಾಗಾಗಿ ಮನೆ ಮನೆಯಲ್ಲಿ ಜನ ಉನ್ನತ ಶಿಕ್ಷಣಕ್ಕೆ ಆಸಕ್ತಿ ತೋರುವಂತಾಯಿತು. ಉಡುಪಿ ಮತ್ತು ಪಕ್ಕದ ಮಣಿಪಾಲವೂ ಸೇರಿ ಶೈಕ್ಷಣಿಕ ಕ್ಷೇತ್ರದಲ್ಲಿ ಮಹತ್ತರ ಸಾಧನೆ ನಡೆಸಿತು. ಒಂದು ದೃಷ್ಟಿಯಲ್ಲಿ ಉಡುಪಿ-ಮಣಿಪಾಲವು ಧಾರ್ಮಿಕ-ವಿದ್ಯಾ ರಂಗದಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಳ್ಳುವ ಮಟ್ಟಕ್ಕೆ ಏರುವ ಸನ್ನಾಹದಲ್ಲಿದ್ದುದು ಸತ್ಯ.

ನವಯೌವನದ ಹೊಸ್ತಿಲಲ್ಲಿದ್ದ ಟಿ. ರಾಘವ ಆಚಾರ್ಯರು ತಮ್ಮ ಹಿರಿಯರ ಕಸುಬನ್ನು ಅನಿವಾರ್ಯವಾಗಿ ಒಪ್ಪಿಕೊಂಡು ಅಪ್ಪಿಕೊಂಡಿದ್ದರೂ, ಮುಂದೆ ಅದೇ ಎರಕದ ಬದುಕನ್ನು ಆಸಕ್ತಿಯಿಂದ ಆಳವಾಗಿ ಅಭ್ಯಸಿಸಿದರು. ಓರ್ವ ವ್ಯಕ್ತಿ ತಾನು ಮಾಡುವ ಕೈಂಕರ್ಯವನ್ನು ಕಾಯಾ-ವಾಚಾ-ಮನಸಾ,

ತ್ರಿಕರಣಪೂರ್ವಕವಾಗಿ ನೆಚ್ಚಿಕೊಂಡರೆ ಆತನು ಸಫಲತೆಯನ್ನು ಪಡೆಯುವುದು ಸಾಧ್ಯ ಎನ್ನುವುದಕ್ಕೆ ಟಿ. ರಾಘವ ಆಚಾರ್ಯರು ಜೀವಂತ ಉಪಮೆಯಾದರು.

ಲೋಹಶಿಲ್ಪಿ ಟಿ. ರಾಘವ ಆಚಾರ್ಯರ ಕರ್ತವ್ಯ ದಕ್ಷತೆ, ಏಕಾಗ್ರತೆ, ಕಾರ್ಯಕ್ಷಮತೆ ಮತ್ತು ನೈಪುಣ್ಯತೆ, ವೃತ್ತಿ ಜೀವನದಲ್ಲಿ ಪುಟಿಯುತ್ತಿರುವ ಅದಮ್ಯ ಉತ್ಸಾಹ ಇವೆಲ್ಲವನ್ನು ಕಣ್ಣಾರೆ ಕಂಡ ಬೆಂಗಳೂರಿನ ರಾಷ್ಟ್ರೀಯ ಕರಕುಶಲ ಅಭಿವೃದ್ಧಿ ನಿಗಮದ ನಿರ್ದೇಶಕರಾದ ಶ್ರೀ ಹರಿಹರನ್‌ರವರು ನಿಬ್ಬೆರಗಾದುದು ನಿಜ. ಅದರ ಪರಿಣಾಮವಾಗಿಯೇ ನವನವೀನ ಮಾದರಿಯ ಕಂಚು, ಪಂಚಲೋಹದ ಶಿಲ್ಪಗಳನ್ನು ವಿನ್ಯಾಸಗೊಳಿಸಲು ಟಿ. ರಾಘವ ಆಚಾರ್ಯರನ್ನು ಬೆಂಗಳೂರಿಗೆ ಕರೆಸಿಕೊಂಡರು. ಆ ಕಾಲದಲ್ಲಿ ಇಂತಹ ಬಹುಮಹತ್ವದ ಜವಾಬ್ದಾರಿಯನ್ನು ತರುಣ ಶಿಲ್ಪಿಗಳಿಗೆ ವಹಿಸಿಕೊಡುವುದು ಬಹಳ ಅಪರೂಪ. ಇಂತಹ ಒಂದು ಅವಕಾಶ ಒದಗಿ ಬಂದುದು ಪ್ರಾಯಃ ಟಿ. ರಾಘವ ಆಚಾರ್ಯರ ಹೆತ್ತಬ್ಬೆಯ ಆಶೀರ್ವಾದದ ಬಲದಿಂದಲೇ! ಆಚಾರ್ಯರ ಅಂತರ್ಯದಲ್ಲಿ ಸೇರಿಕೊಂಡಿದ್ದ ಅಪೂರ್ವ ಕಲಾಪ್ರತಿಭೆಯು ಪ್ರಕಟವಾಗಲು ಇದು ಒಂದು ರಹದಾರಿಯನ್ನು ಒದಗಿಸಿಕೊಟ್ಟಿತ್ತೆನ್ನುವುದರಲ್ಲಿ ಸಂಶಯವಿಲ್ಲ.

## ಗೃಹಸ್ಥ ಜೀವನ

ಸರಿಸುಮಾರು 1957ರಲ್ಲಿ ಟಿ. ರಾಘವ ಆಚಾರ್ಯರು ಗೃಹಸ್ಥ ಜೀವನ ಪ್ರವೇಶಿಸಿರುವುದು ತಿಳಿಯುವುದು. ಇವರ ಧರ್ಮಪತ್ನಿ ರಾಧಮ್ಮನವರು ಆಚಾರ್ಯರ ಹುಟ್ಟೂರು ಸಮೀಪದ ಪಯ್ಯನೂರಿನವರು. ರಾಧಮ್ಮನವರು ಆ ಕಾಲದಲ್ಲಿ ಪಯ್ಯನೂರಿನ

ಚಿನ್ನದ ವಿವಿಧ ಆಭರಣ ತಯಾರಿಸುವ ಕುಟುಂಬ ಮೂಲದಿಂದ ಬಂದವರು. ಲೋಹ ಶಿಲ್ಪದ, ಅದರಲ್ಲೂ ಎರಕದ ಕೆಲಸದಲ್ಲಿ ನಿರತರಾದ ಕುಟುಂಬದ ಗಂಡು ಮಕ್ಕಳಿಗೆ ಕನ್ಯೆಯರನ್ನು ಧಾರೆ ಎರೆದು ಕೊಡಲು ಚಿನಿವಾರ (ಚಿನ್ನದ ಕೆಲಸದ) ಮನೆತನಗಳು ಸುತರಾಂ ಒಪ್ಪುತ್ತಿರಲಿಲ್ಲ. ಯಾಕೆಂದರೆ ಎರಕದ ಸಂದರ್ಭದಲ್ಲಿ ಅವಶ್ಯವಿರುವ ನವಿರಾದ ಮಣ್ಣು ತಯಾರಿಸಲು ಮನೆಯ ಹೆಣ್ಣು ಮಕ್ಕಳು ಮಣ್ಣು ಅರೆಯುವ ದೈಹಿಕ ಶ್ರಮಕ್ಕೆ ಒಳಗಾಗುವುದು ಅನಿವಾರ್ಯವಾಗಿತ್ತು.

ಆದರೂ ರಾಧಮ್ಮನವರ ಋಣ ಈ ಮನೆತನಕ್ಕೆ ಸೊಸೆಯಾಗಿ ಬರುವಲ್ಲಿ ಪೂರಕವಾಗಿ ಬಗೆದಿತ್ತು. ರಾಧಮ್ಮನವರು ಆಚಾರ್ಯರ ಕೈ ಹಿಡಿದು ಮಹಾಸತಿಯಾಗಿ ಅತ್ಯಂತ ಶ್ರದ್ಧಾಭಕ್ತಿಯಿಂದ ಪತಿಗೃಹ ಸೇರಿದರು. ಉಡುಪಿಯ ಬದುಕಿಗೆ ಹೊಂದಿಕೊಂಡರು.

ಅಂದಿನಿಂದ ಇಂದಿನವರೆಗೆ ತನ್ನ ಗೃಹಸ್ಥ ಧರ್ಮಕ್ಕೆ ಯಾವುದೇ ಚ್ಯುತಿ ಬರದಂತೆ ಗೃಹಕೃತ್ಯದ ಜವಾಬ್ದಾರಿಯನ್ನು ದಕ್ಷತೆಯಿಂದ ನಿರ್ವಹಿಸಿದರು. ಪತಿಭಕ್ತಿ ಪರಾಯಣೆಯಾಗಿ, ಮೂರು ಮಕ್ಕಳ ತಾಯಿಯಾಗಿ, ಮಾತೃ ವಾತ್ಸಲ್ಯವನ್ನು ಮೆರೆದರು. ಉಡುಪಿಗೆ ಬಂದ ಬಳಿಕ ಪತಿಯ ಜೊತೆಗೂಡಿ ಲೋಹಶಿಲ್ಪಕ್ಕೆ ಸಂಬಂಧಿಸಿ ಎಲ್ಲವನ್ನು ಕಲಿತರು. ಕ್ರಮೇಣ ಕರಗತ ಮಾಡಿಕೊಂಡರು. ಮುಂದೆ ವೃತ್ತಿ ಜೀವನದಲ್ಲಿ ಪತಿಯ ಜೊತೆ "ಕಾರ್ಯೇಶು ದಾಸಿ-ಕರಣೇಶು ಮಂತ್ರಿ....." ಎಂಬ ಆರ್ಯ ವಚನದಂತೆ ಅವರ ಎಲ್ಲ ಬೇಕು ಬೇಡಗಳಿಗೆ ಸ್ಪಂದಿಸುತ್ತ ಕರ್ತವ್ಯ ನಿರ್ವಹಿಸಿ ಕೃತಕೃತ್ಯರಾಗಿ ಆದರ್ಶ ಮಹಿಳೆಯೆನಿಸಿಕೊಂಡರು. ಒಂದು ದೃಷ್ಟಿಯಲ್ಲಿ ಈ ಹಿರಿಯ ದಂಪತಿಗಳನ್ನು 'ವಸಿಷ್ಠ-ಅರುಂಧತಿ'ಗೆ ಹೋಲಿಸಿದರೆ ಅದು ಅತಿಶಯೋಕ್ತಿಯಲ್ಲ.

ಟಿ. ರಾಘವ ಆಚಾರ್ಯರ ಹಿರಿಯ ಪುತ್ರಿಯವರು ಪತಿ ಲೋಹಿತಾಕ್ಷ ಜೊತೆ ಉದಕಮಂಡಲದಲ್ಲಿ ಚಿನ್ನಾಭರಣಗಳ

ತಯಾರಿಯಲ್ಲಿ ಸಹಕರಿಸುತ್ತಿರುವರು. ಮಗ ಹರಿದಾಸ್ ಆಚಾರ್ಯರವರು ಎಂ.ಟೆಕ್. ಪದವೀಧರರು. ಅಮೇರಿಕದಲ್ಲಿ ಉನ್ನತ ಉದ್ಯೋಗದಲ್ಲಿದ್ದು ಪತ್ನಿ ನಂದಿತಾರ ಜೊತೆ ಜೀವನ ನಡೆಸುತ್ತಿರುವರು. ಕೊನೆಯ ಮಗ ರಾಜೇಶ್ ಆಚಾರ್ಯರು ಪತ್ನಿ ಶ್ರೀಜ ಜೊತೆ ಉಡುಪಿಯಲ್ಲಿ ಮಾತಾ ಪಿತೃಗಳ ಸೇವೆಯಲ್ಲಿ ಧನ್ಯತೆ ಪಡೆಯುತ್ತ, ಉಡುಪಿ ಸಂಸ್ಕೃತ ಕಾಲೇಜಿನ ಬಳಿ 'ಕೌಶಲ' ಎಂಬ ಲೋಹಶಿಲ್ಪದ ವ್ಯಾಪಾರಿ ಕೇಂದ್ರವನ್ನು ಸ್ಥಾಪಿಸಿ ಗ್ರಾಹಕರ ಅವಶ್ಯಕತೆಗಳನ್ನು ಪೂರೈಸುತ್ತಿರುವರು.

ಕಿರಿಯ ಮಗ ರಾಜೇಶ್ ತಂದೆಯೊಂದಿಗೆ ಲೋಹ ಶಿಲ್ಪದ ಅಭ್ಯಾಸ ಮಾಡಿ, ಬೆಂಗಳೂರಿನ ಪ್ರಾದೇಶಿಕ ವಿನ್ಯಾಸ ಕೇಂದ್ರದಲ್ಲಿ ಲೋಹ ಶಿಲ್ಪದ ಉನ್ನತ ತರಬೇತಿಯನ್ನು ಪಡೆದು, ಬಿಡದಿಯಲ್ಲಿರುವ ಆರ್ಟ್-ರ್‍ಯಾಪ್‌ನಲ್ಲಿ ಒಂದು ವರ್ಷದ ತರಬೇತಿಯನ್ನು ಪಡೆದರು, ಬಳಿಕ ತಮಿಳುನಾಡಿನ ಸ್ವಾಮಿಮಲೈನಲ್ಲಿರುವ ಗೋವಿಂದ ಸ್ವಾಮಿ ಸ್ಥಪತಿಯವರ ಬಳಿ ಚೋಳ ಶೈಲಿಯ ಕಂಚಿನ ವಿಗ್ರಹಗಳ ತಯಾರಿ ಬಗ್ಗೆ ಎರಟು ವರ್ಷ ಅಭ್ಯಾಸ ಮಾಡಿದರು.

ಖ್ಯಾತ ನಟೀಸನ್ ಆ್ಯಂಟಿಕ್-ಆರ್ಟ್‌ನಲ್ಲಿ ಎರಡು ವರ್ಷಗಳ ಕಾಲ ಅಸಿಸ್ಟೆಂಟ್ ಮಾಸ್ಟರ್ ಕ್ರಾಫ್ಟ್‌ಮನ್ ಆಗಿ ದುಡಿದ ಬಳಿಕ ಮರಳಿ ಉಡುಪಿಗೆ ಬಂದು ತಂದೆಯೊಂದಿಗೆ ಕೈಜೋಡಿಸಿ ಸ್ಥಳೀಯ ಬೇಡಿಕೆಗೆ ಅನುಗುಣವಾಗಿ ಲೋಹಶಿಲ್ಪಗಳನ್ನು ರಚಿಸುತ್ತಿದ್ದಾರೆ.

ಕ್ರಾಫ್ಟ್ ಕೌನ್ಸಿಲ್ ಆಫ್ ಕರ್ನಾಟಕದವರಿಂದ ವಿಶ್ವಕರ್ಮ ಪ್ರಶಸ್ತಿಯನ್ನು (2002), ಕ್ರಾಫ್ಟ್ ಕೌನ್ಸಿಲ್ ಆಫ್ ಇಂಡಿಯಾದವರಿಂದ ಕಮಲ ಪ್ರಶಸ್ತಿಯನ್ನು ಪಡೆದಿರುತ್ತಾರೆ. ಇತಿಹಾಸದಲ್ಲಿ ಎಂ.ಎ. ಪದವಿಯನ್ನು ಪಡೆದ ರಾಜೇಶ್ ಮಣಿಪಾಲದ ಮಾಹೆ ಜ್ಯುವೆಲ್ಲರಿ ಡಿಸೈನ್ ಕಾಲೇಜು ಸೇರಿದಂತೆ ವಿವಿಧ ಸಂಸ್ಥೆಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಬೆಂಗಳೂರಿನಲ್ಲಿ

1957ರಲ್ಲಿ ಬೆಂಗಳೂರಿನಲ್ಲಿ ಕರ್ತವ್ಯ ನಿರತರಾಗಿರುವ ವೇಳೆ ಟಿ. ರಾಘವ ಆಚಾರ್ಯರ ಧರ್ಮಪತ್ನಿ ರಾಧಮ್ಮನವರು ಈ ಕೇಂದ್ರದಲ್ಲಿ ಪತಿಯ ಜೊತೆಗೂಡಿ ಕಠಿಣ ಪರಿಶ್ರಮದಿಂದ ದುಡಿದರು. ಹೊಸ ವಿನ್ಯಾಸದ ಡಿನ್ನರ್‌ಸೆಟ್, ಫ್ಲವರ್ ಪಾಟ್, ಹಂಸದೀಪ, ರೈಸ್ ಪಾಟ್, ಮೊದಲಾದವುಗಳನ್ನು ತಯಾರಿಸಿದರು. ಆ ಸಂದರ್ಭದಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯರನ್ನು ಭೇಟಿಯಾಗುವ ಅವಕಾಶ ಒದಗಿತು. ಚಟ್ಟೋಪಾಧ್ಯಾಯರು ರಾಘವ ಆಚಾರ್ಯರ ಶಿಲ್ಪ ಕಲಾ ಪ್ರಾವೀಣ್ಯತೆಯನ್ನು ಮುಕ್ತಕಂಠದಿಂದ ಶ್ಲಾಘಿಸಿರುವುದನ್ನು ಆಚಾರ್ಯರು ಸ್ಮರಿಸಿಕೊಳ್ಳುತ್ತಿದ್ದರು.

ಇದೇ ಕಾಲಘಟ್ಟದಲ್ಲಿ ಕರಕುಶಲ ಅಭಿವೃದ್ಧಿ ಕೇಂದ್ರದ ವತಿಯಿಂದ ನವದೆಹಲಿಯ ಪ್ರಗತಿ ಮೈದಾನದಲ್ಲಿ ಆಯೋಜಿಸಲಾಗಿದ್ದ ಕಂಚು ಲೋಹ ಶಿಲ್ಪದ ವಿವಿಧ ಮಜಲುಗಳು ಮತ್ತು ವಿನ್ಯಾಸಗಳ ಬಗೆಗೆ ವಿಸ್ತೃತ ಮಾಹಿತಿಯ ಜೊತೆಗೆ ಪ್ರಾತ್ಯಕ್ಷಿತೆ ನೀಡುವ ಘನತರದ ಜವಾಬ್ದಾರಿಯನ್ನು ರಾಘವಾಚಾರ್ಯರಿಗೆ ವಹಿಸಿ ಕೊಡಲಾಯಿತು. ಕರಕುಶಲ ಅಭಿವೃದ್ಧಿ ಕೇಂದ್ರದಲ್ಲಿ ಒಂದು ವರ್ಷ ಪರಿಪೂರ್ಣ ಪರಿಶ್ರಮದಿಂದ ದಂಪತಿಗಳು ದುಡಿದರು. ತಮ್ಮ ಕೈಂಕರ್ಯದಲ್ಲಿ ಸೈ ಎನಿಸಿಕೊಂಡು ಎಲ್ಲರ ಪ್ರಶಂಸೆಗೆ ಒಳಗಾದರು.

ಕರಕುಶಲ ಅಭಿವೃದ್ಧಿ ಕೇಂದ್ರದಲ್ಲಿ ಒಂದು ವರ್ಷ ಶ್ರಮಿಸಿದ ಬಳಿಕ ಆಚಾರ್ಯರನ್ನು ಬೆಂಗಳೂರಿನ ಚರ್ಚ್ ಸ್ಟ್ರೀಟ್‌ನಲ್ಲಿರುವ ಪ್ರಾದೇಶಿಕ ವಿನ್ಯಾಸ ಕೇಂದ್ರದಲ್ಲಿ ಅಸಿಸ್ಟೆಂಟ್ ಮಾಸ್ಟರ್ ಆಫ್ ಕ್ರಾಫ್ಟ್‌ಮನ್ ಆಗಿ ನೇಮಕಗೊಳಿಸಿದರು. ಆ ಸಂದರ್ಭದಲ್ಲಿ ವಿನ್ಯಾಸ ಕೇಂದ್ರದಲ್ಲಿ ಶ್ರೀಯುತ ಬದ್ರಿಯವರು ನಿರ್ದೇಶಕರಾಗಿದ್ದರು. ಈ ಸಂಸ್ಥೆಯಲ್ಲಿ ಐದು ವರ್ಷಗಳ ಕಾಲ ದುಡಿದ ಟಿ. ರಾಘವ ಆಚಾರ್ಯರು ಶಿಲ್ಪಕಲೆಯ ವಿವಿಧ ಆಯಾಮಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ

ಅಧ್ಯಯನ ಮಾಡಿದರು. ಆ ಮೂಲಕ ಆಚಾರ್ಯರು ತಮ್ಮ ವೃತ್ತಿ ಜೀವನದಲ್ಲಿ ಇನ್ನಷ್ಟು ಅವಿಷ್ಕಾರಗಳನ್ನು ಮಾಡಿ ಹೊಸ ಸಾಧನೆಯತ್ತ ದಾಪುಗಾಲಿಡಲು ಸಮರ್ಥರಾದರು.

ವಿಶ್ವವಿದ್ಯಾನಿಲಯದ ಉನ್ನತ ಪದವಿಯಿಲ್ಲದೆಯೂ ಒಬ್ಬ ಸಾಮಾನ್ಯ ವ್ಯಕ್ತಿ ಸಾಧನೆಯ ಮೂಲಕ ಕೀರ್ತಿಯ ಶಿಖರಕ್ಕೇರಬಹುದು ಎಂಬುದನ್ನು ಸಾಬೀತು ಪಡಿಸಿದರು. ಅದೇ ಸಂದರ್ಭದಲ್ಲಿ ನಾಡಿನ ಹೆಸರಾಂತ ಶಿಲ್ಪಿ ದೇವಲಕುಂದ ವಾದಿರಾಜರ ಪರಿಚಯದ ಸದವಕಾಶ ದೊರಕಿತು. ಅವರ ಇಚ್ಛೆಯಂತೆ ಎರಕ ಕಲೆಯಲ್ಲಿ ನಿಸ್ಸೀಮರಾದ ರಾಘವಾಚಾರ್ಯ ದಂಪತಿಗಳ ಮೇಲ್ವಿಚಾರಣೆಯಲ್ಲಿ ಗಾಂಧಾರ ಬುದ್ಧ, ವಿಶ್ವೇಶ್ವರಯ್ಯ ಪ್ರತಿಮೆ ಮೊದಲಾಗಿ ಅನೇಕ ಕಲಾಕೃತಿಗಳ ಎರಕ ಮಾಡಿ ಕೊಡಲಾಯಿತು. ಶಿಲ್ಪಿ ವಾದಿರಾಜರು ರಾಘವಾಚಾರ್ಯರನ್ನು ಎರಕ ಕಲಾವಿದರಲ್ಲಿ ಅಗ್ರಗಣ್ಯರು ಎಂದು ಮುಕ್ತ ಕಂಠದಿಂದ ಹೊಗಳಿದರು ಕೂಡಾ.

ತನ್ನ ಬೆಂಗಳೂರಿನ ಪದನಿಮಿತ್ತ ಕರ್ತವ್ಯವನ್ನು ಪೂರೈಸಿ 1960ನೇ ಇಸವಿಯಲ್ಲಿ ಉಡುಪಿಗೆ ಮರಳಿ ಬಂದರು. ತನ್ನ ಕಡಿಯಾಳಿಯ ನಿವಾಸದಲ್ಲಿ ಕಾರ್ಯಪ್ರವೃತ್ತರಾದರು. ತಾವು ಬೆಂಗಳೂರಿನಲ್ಲಿ ನಡೆಸಿದ ಅನೇಕ ಹೊಸ ಪ್ರಯೋಗಗಳಿಂದ ಸಿದ್ಧಗೊಂಡ ವಿವಿಧ ವಿನ್ಯಾಸಗಳ ಕಂಚುಲೋಹದ ಪಾತ್ರೆಗಳು ಮತ್ತಿನ್ನಿತರ ಪೂಜಾ ಪರಿಕರಗಳನ್ನು ಸ್ಥಳೀಯ ಮಾರುಕಟ್ಟೆಗೆ ಬಿಡುಗಡೆಗೊಳಿಸಿದರು. ಅದೇ ರೀತಿ ಕಾವೇರಿ ಹ್ಯಾಂಡಿಕ್ರಾಫ್ಟ್ ಸಂಸ್ಥೆಗೆ ವಿವಿಧ ಗಾತ್ರ ಮತ್ತು ನಮೂನೆಯ ಕಾಲುದೀಪಗಳನ್ನು ತಯಾರಿಸಿ ಕೊಡತೊಡಗಿದರು. ಈ ಪರಿಕ್ರಮ ಸುಮಾರು 19 ವರ್ಷಗಳ ಕಾಲ ನಡೆಯಿತು. ಹಾಗಾಗಿ ಎಲ್ಲೆಡೆ ಟಿ. ರಾಘವ ಆಚಾರ್ಯರ ಶಿಲ್ಪ ಕಲಾ ಪ್ರತಿಭೆ ಬೆಳಕಿಗೆ ಬಂದು ಪ್ರಸಿದ್ಧಿ ಪಡೆಯಿತು.

ಉಡುಪಿಗೆ ಮರಳಿದ ಬಳಿಕ ಟಿ. ರಾಘವ ಆಚಾರ್ಯರು

ತಮ್ಮ ಹೊಸ ಪ್ರಯೋಗಗಳನ್ನು ಸ್ವಂತ ಕಾರ್ಯಾಗಾರದಲ್ಲಿ ಪ್ರಾರಂಭಿಸಿದರು. ಅವರ ಧರ್ಮಪತ್ನಿ ರಾಧಮ್ಮನವರು ಎಲ್ಲ ಕಲಾಕೌಶಲ್ಯಗಳಲ್ಲಿ ಜೊತೆಯಾಗಿ ದುಡಿದರು. ಅವಿಭಜಿತ ದ.ಕ. ಜಿಲ್ಲೆ ಈ ಮೊದಲು ವಿವರಿಸಿದಂತೆ ತುಳು ಭಾಷೆ ಸಂಸ್ಕೃತಿಯ ಮೂಲ ನಿವಾಸಿಗಳ ಆವಾಸ ಬೀಡು. ಇಲ್ಲಿಯ ಜನ ತಮ್ಮ ಬದುಕಿನ ಆಚರಣೆಗಳ ಜೊತೆ ಅವಿಭಾಜ್ಯ ಅಂಗವಾಗಿ ದೈವಗಳೆಂಬ ಶಕ್ತಿಯನ್ನು ಆರಾಧಿಸಿಕೊಂಡು ಬರುತ್ತಿದ್ದರು.

ಇಲ್ಲಿಯವರು ಜುಮಾದಿ, ಪಂಜುರ್ಲಿ, ಕಲ್ಕುಡ-ವರ್ತೆ, ಬಬ್ಬು- ತನಿಮಾನಿಗ, ಬಬ್ಬರ್ಯ, ಕೊಡಮಂದಾಯ, ಜಾರಂದಾಯ, ಕೋಟಿ ಚೆನ್ನಯ, ಕಾಂತಾಬಾರೆ- ಬೂದಾಬಾರೆ, ಹ್ಯಾಗುಳಿ, ಚಿಕ್ಕಮ್ಮ, ಏಲುವರು ಸಿರಿಗಳು, ಮುಗ್ಗೆರ್ಲು, ಒಡಿಲ್ತಾಯ – ಈ ರೀತಿಯಾಗಿ ನೂರಾರು ದೈವಗಳನ್ನು ಸಾಮಾನ್ಯ ಸ್ಥಾನ ಚಾವಡಿಯಲ್ಲಿ, ಮಣೆ ಮಂಚದಲ್ಲಿ, ತೋಟದಲ್ಲಿ, ಮರದ ಬುಡದಲ್ಲಿ ಕಲ್ಲನ್ನು ನೆಟ್ಟು, ನಂಬಿಕೊಂಡು ಬರುತ್ತಿದ್ದರು. ತುಳುಜನ ವಿದ್ಯಾವಂತರಾಗಿ, ಉದ್ಯೋಗ, ಉದ್ದಿಮೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು, ಆರ್ಥಿಕ ಅನುಕೂಲತೆಯನ್ನು ಪಡೆದುಕೊಂಡರು. ಅದರ ಪರಿಣಾಮವಾಗಿ ಕಳೆದ ಶತಮಾನದಲ್ಲಿ ತುಳು ಜನರ ಬದುಕಿನ ವ್ಯವಸ್ಥೆಯಲ್ಲಿ ಅದ್ಭುತವೆನಿಸುವಷ್ಟು ಬದಲಾವಣೆಯಾಗಿರುವುದನ್ನು ನಾವು ಗಮನಿಸಬಹುದಾಗಿದೆ.

ತಾವು ಅನುಕೂಲವಾಗಿ ತಾರಸಿ ಕಟ್ಟಡದ ಸುಂದರ ಭವನಗಳಲ್ಲಿ ವೈಭವೋಪೇತ ಜೀವನ ನಡೆಸುವಾಗ ತಮ್ಮ ಆರಾಧ್ಯ ದೈವಗಳನ್ನು ಸುಸ್ಥಿತಿಯ ವ್ಯವಸ್ಥೆಯಲ್ಲಿ ಪೂಜೆ ಮಾಡಿಕೊಂಡು ಬರುವ ಚಿಂತನೆ ನಡೆಸಿದರು. ಇದೇ ಕಾಲಘಟದಲ್ಲಿ ತನ್ನ ಕಾರ್ಯಕ್ಷೇತ್ರವನ್ನು ವಿವಿದೆಡೆ ಪಸರಿಸಿಕೊಂಡ ಟಿ. ರಾಘವ ಆಚಾರ್ಯರ ಲೋಹಶಿಲ್ಪದ ಚಾಕಚಕ್ಯತೆಯ ಕಲಾ ಪ್ರೌಢಿಮೆ ತುಳುವರ ದೈವಾರಾಧನೆಯ

## ಶಿಲ್ಪಿಯ ಮನದಾಳದ ಮಾತುಗಳು

ನಾನು ಕೇರಳ ರಾಜ್ಯದಲ್ಲಿ ಜನಿಸಿದ್ದರೂ, ಆ ಕಾಲದ ಬಹುತೇಕ ಶಿಲ್ಪಿಗಳಂತೆ ಬೇಡಿಕೆ ಇರುವೆಡೆ ವಲಸೆ ಹೋಗುವುದು ಅನಿವಾರ್ಯವಾಯಿತು. ಹಾಗಾಗಿ ಹಿರಿಯಣ್ಣನ ಜೊತೆ ಜೀವನವನ್ನು ಹುಡುಕಿಕೊಂಡು ಉಡುಪಿ ಸೇರಿಕೊಂಡೆ. ಧಾರ್ಮಿಕ ನಗರವೆಂದೆ ಪ್ರಸಿದ್ಧಿ ಪಡೆದಿರುವ ಉಡುಪಿಯ ಜನರ ಪ್ರೀತಿ ವಾತ್ಸಲ್ಯ, ವಿಶ್ವಾಸ ಮತ್ತು ನಮ್ಮ ವೃತಿಪರರ ಭ್ರಾತೃತ್ವ ಇವೆಲ್ಲವುಗಳನ್ನು ನಾನು ಬಹಳವಾಗಿ ಮೆಚ್ಚಿಕೊಂಡಿರುವೆನು. ಬಹಳ ಬೇಗ ಉಡುಪಿಯ ಬದುಕಿಗೆ ಹೊಂದಿಕೊಂಡು ನಮ್ಮ ಕುಲಬಾಂಧವರ ಜೊತೆ ಕೆಲಸ ಕಲಿಯುವುದರಲ್ಲಿ ಮುಂದಾದೆನು.

ನನಗೆ ಬಾಲ್ಯದಿಂದ ಲೋಹ ಶಿಲ್ಪದ ಕೆಲಸದಲ್ಲಿ, ಎರಕದ ಕುರಿತಾದ ಪೂರ್ಣ ಅನುಭವ ಪಡೆಯುವ ಆಸೆ ಇತ್ತು. ಉಡುಪಿಗೆ ಬಂದ ಬಳಿಕ ಹುಟ್ಟೂರು ಬಿಟ್ಟು ಬಂದ ತಾರುಣ್ಯದಲ್ಲಿ ಕೆಲವೊಂದು ವಿಚಾರಗಳಲ್ಲಿ ಪೂರ್ಣ ವ್ಯಕ್ತಿಸ್ವಾತಂತ್ರ್ಯವೂ ಒದಗಿ ಬಂತು. ಹಾಗಾಗಿ ಲೋಹ ಶಿಲ್ಪದಲ್ಲಿ ಅತ್ಯಂತ ಪ್ರಮುಖವಾದ ಕಲೆಯನ್ನು ಸಂಪೂರ್ಣ ಕರಗತಗೊಳಿಸುವ ಬಯಕೆ ಟಿಸಿಲೊಡೆಯಿತು. ನಾನು ನನ್ನ ನಿತ್ಯಜೀವನದಲ್ಲಿ ಕಸುಬಿನ ಜೊತೆ ಎರಕದ ಒಳ ಹೊರಗನ್ನು ಸರಿಯಾಗಿ ಅಭ್ಯಾಸ ಮಾಡ ತೊಡಗಿದೆನು. ನಿಜ ಹೇಳಬೇಕೆಂದರೆ ಒಬ್ಬ ಪರಿಣಿತ ಲೋಹ ಶಿಲ್ಪಿ ತಯಾರಾಗಬೇಕಿದ್ದರೆ, ಹತ್ತಾರು ವರ್ಷಗಳ ಕಾಲದ ಅವಶ್ಯಕತೆ ಇರುವುದು. ಇದು ಒಂದು ರೀತಿಯ ತಪಸ್ಸೂ ಹೌದು. ಒಂದು ತೆರನಲ್ಲಿ ಆಬೆಯಲ್ಲಿ ಬೇಯಲಿಟ್ಟ ಮಣ್ಣಿನ ಮಡಕೆ ಸರಿಯಾಗಿ ಶಾಖ ತಗುಲದೆ ಅರ್ಧಬೆಂದ ಸ್ಥಿತಿಯಂತೆ ಎಷ್ಟೋ ಬಾರಿ ನಿರೀಕ್ಷಿತ ಫಲಸಿಗದೆ ಕೈ ಸುಟ್ಟುಕೊಂಡುದೂ ಇದೆ. ಆದರೂ ಪೂರ್ಣ ಮನಸ್ಸಿನಿಂದ ಛಲ ಸಾಧಿಸಿದವರಿಗೆ ಫಲ ಶತಃಸಿದ್ಧ ಎಂಬುದಕ್ಕೆ ನಾನೇ ಉದಾಹರಣೆಯಾದೇನು!

ಮೇಲೆ ಅಗಾಧ ಪ್ರಭಾವ ಬೀರಿರುವುದು ಸ್ಪಷ್ಟವಾಗಿ ತಿಳಿಯುವುದು. ಟಿ. ರಾಘವ ಆಚಾರ್ಯರು ತಾನು ಬೆಳೆಯುವುದರ ಜೊತೆಗೆ ಪರಿಸರದ ಇತರ ಕಂಚುಲೋಹದ ಶಿಲ್ಪಿಗಳ ಜೊತೆ ಬೆರೆತು ಮಾಹಿತಿಯನ್ನು ಬದಲಿಸಿಕೊಳ್ಳುವುದರೊಂದಿಗೆ ಜೊತೆಗೆ ಅವರಿಗೂ ಸಾಕಷ್ಟು ಸುಧಾರಣೆಯಾಗುವ ಅವಕಾಶವನ್ನು ಒದಗಿಸಿ ಕೊಟ್ಟರು. ಈ ಕಾರಣದಿಂದ ದೈವಾರಾಧನೆಗೆ ಸಂಬಂಧಿಸಿ ಮುಖಮೂರ್ತಿ, ಆಭರಣ ಮತ್ತಿನ್ನಿತರ ಪರಿಕರಗಳನ್ನು ಸರಾಗವಾಗಿ ದೈವ ನಂಬುವ ಮನೆಗಳಿಗೆಲ್ಲ ಕಡ್ಡಾಯವಾಗಿ ಬಳಸತೊಡಗಿದರು. ಕಂಚು ಲೋಹ (ಪಂಚ ಲೋಹ), ಹಿತ್ತಾಳೆಯ ಅನೇಕ ಕಲಾಕೃತಿಗಳು ಮಾರುಕಟ್ಟೆ ಪ್ರವೇಶಿಸಿದುವು.

ಅವುಗಳಲ್ಲಿ ಮುಖ್ಯವಾಗಿ ಜಿಮಾದಿ, ಪಂಜುರ್ಲಿ, ಪಿಲ್ಚಂಡಿ, ಬಬ್ಬು ಮೊದಲಾದ ದೈವಗಳ ವಿವಿಧ ಭಂಗಿಯ ಮುಖವಾಡಗಳು, ಎದೆಕಟ್ಟು, ಮೊಲೆಕಟ್ಟು, ತಲೆಮಣಿ, ತಲೆಪಟ್ಟ, ವಿವಿಧ ರೀತಿಯ ಕೈಕಡಗ, ಕಾಲ್ಕಡಗಗಳು ತಯಾರಾದವು. ಎಲ್ಲ ದೈವಗಳಿಗೆ ಸಂಬಂಧಿಸಿ ದೈವನರ್ತಕರು ಕೋಲ-ನೇಮಗಳ ಸಂದರ್ಭದಲ್ಲಿ ಕಾಲಿಗೆ ಧರಿಸುವ ಗಗ್ಗರ, ಒಂಟಿ ಗಗ್ಗರಗಳು, ವಿವಿಧ ವಿನ್ಯಾಸದ ಕಾಲ್ಗೆಜ್ಜೆಗಳು, ಮುಖವಾಡಗಳು, ಖಡ್ಸಲೆ (ಖಡ್ಗ); ಸುರಿಯಗಳು, ಅಡ್ಯಣ (ಗುರಾಣಿ); ಚಲ್ಲಣಕ್ಕೆ ಪೋಣಿಸಿದ ಗೆಜ್ಜೆಗಳು, ವಿವಿಧ ಪುರುಷ-ಸ್ತ್ರೀ ದೈವಗಳ ಮೂರ್ತಿಗಳು ಬಹಳ ಬೇಗ ಬೇಡಿಕೆ ಪಡೆದುಕೊಂಡವು. ಮಾತ್ರವಲ್ಲದೆ ಪ್ರಾಣಿ ದೈವಗಳ ಮುಖವಾಡಗಳು, ಮುಖ್ಯ ದ್ವಾರಕ್ಕೆ ಹೊದಿಸುವ ಕವಚಗಳು, ದೈವನರ್ತಕರು ಉತ್ಸವ (ಕೋಲ-ನೇಮ)ಗಳ ಸಂದರ್ಭ ಬೆನ್ನಿನ ಭಾಗದಲ್ಲಿ ಕಟ್ಟಿಕೊಳ್ಳುವ ಹಿತ್ತಾಳೆಯ ಅಣಿಗಳು, ಚಿಕ್ಕ, ದೊಡ್ಡ ಗಾತ್ರದ ಗಂಟಾಮಣಿ ತುಳುನಾಡಿನೆಲ್ಲೆಡೆ ದೈವಸ್ಥಾನಗಳಲ್ಲಿ ವಿಜೃಂಭಿಸಿದುವು. ದೈವಗಳ ವಾರ್ಷಿಕ ಭೋಗ-ತಂಬಿಲಗಳು ನಡೆಯುವಾಗ, ಕೋಲ-ನೇಮ ಮೊದಲಾಗಿ ಉತ್ಸವಗಳಲ್ಲಿ ಈ ದೈವಗಳ ಮುಖ ಮೂರ್ತಿಗಳು

ಮೆರುಗು ಪಡೆದು ದೈವಾಸ್ಥಾನಗಳಲ್ಲಿ ಮತ್ತು ಬಾಲಬಂಡಾರಗಳ ಮೆರವಣಿಗೆಯ ಸಂದರ್ಭ ಭಾವುಕರನ್ನು ಎಷ್ಟು ಆಕರ್ಷಿಸಿದುವು ಎಂದರೆ ಜನಮನದಲ್ಲಿ ಅದ್ಭುತ ಪ್ರತಿಕ್ರಿಯೆ ಒದಗಿ ಬಂತು. ಮುಂದೆ ತುಳುನಾಡಿನ ಮನೆ ಮನೆಗಳಲ್ಲಿ ದೈವಾರಾಧನೆಯ ವಿವಿಧ ಮುಖ ಮೂರ್ತಿಗಳು ರಾರಾಜಿಸಿದುದಂತೂ ಸತ್ಯ. ಟಿ. ರಾಘವ ಆಚಾರ್ಯರ ಶಿಲ್ಪಕಲಾ ಪ್ರೌಢಿಮೆ ತುಳುನಾಡಿನಲ್ಲಿ ಸಾವಿರ ಕಾಲವೂ ಅಚ್ಚಳಿಯದೆ ಉಳಿಯುವಂತಾಯಿತು ಎಂದರೆ ಅದು ಅತಿಶಯೋಕ್ತಿಯಲ್ಲ.

1962ರಲ್ಲಿ ಕರ್ನಾಟಕ ಕರಾವಳಿಯ ಗಂಡು ಕಲೆಯಾದ ಯಕ್ಷಗಾನದ ವೇಷಾಧಾರಿಗಳು ಧರಿಸುವ ಚಿಕ್ಕಗಾತ್ರದ ಲಯಬದ್ಧವಾದ ಸುಮಧುರ ಸ್ವರವನ್ನು ನೀಡುವ ಗೆಜ್ಜೆಗಳನ್ನು ತಯಾರಿಸ ತೊಡಗಿದರು. 1985ರ ಸುಮಾರಿಗೆ ಕುಂಜಿಬೆಟ್ಟು ಮಹತ್ಮಗಾಂಧಿ ಮೆಮೋರಿಯಲ್ ಕಾಲೇಜಿಗೆ ಅನತಿ ದೂರದಲ್ಲಿ ಆಚಾರ್ಯರು ಪ್ರಾರಂಭಿಸಿದ 'ವಿಜಯ ಬೆಲ್ ಮೆಟಲ್ ವರ್ಕ್ಸ್' ಮುಂದಿನ ದಿನಗಳಲ್ಲಿ ಎಲ್ಲ ತರದ ಲೋಹದ ಕೆಲಸ ಕಾರ್ಯಗಳನ್ನು ಪೂರ್ಣ ಪ್ರಮಾಣದಲ್ಲಿ ನಿರ್ವಹಿಸತೊಡಗಿತು. ಮುಂದಿನ ದಿನಗಳಲ್ಲಿ ಈ ಸಂಸ್ಥೆಯು ದೈವದೇವರ ಪರಿಕರಗಳನ್ನು, ಮುಖಮೂರ್ತಿಗಳನ್ನು ತಯಾರಿಸುವುದರ ಜೊತೆಗೆ ಒಂದು ಪ್ರಯೋಗಾಲಯವೂ ಆಗಿ ಬೆಳೆಯಿತು. ಆಗಷ್ಟೇ ಪ್ರವರ್ಧಮಾನಕ್ಕೆ ಬಂದಿದ್ದ ಉಡುಪಿ ಇಂದ್ರಾಳಿ ಯಕ್ಷಗಾನ ತರಬೇತಿ ಸಂಸ್ಥೆಯಾದ ಯಕ್ಷಗಾನ ಕೇಂದ್ರದ ವಿದ್ಯಾರ್ಥಿಗಳಿಗಾಗಿ ಕಾಲ್ಗೆಜ್ಜೆಗಳನ್ನು ತಯಾರಿಸುವಂತೆ ಬೇಡಿಕೆ ಬಂತು.

ಟಿ. ರಾಘವ ಆಚಾರ್ಯರು ಸರಬರಾಜು ಮಾಡಿದ್ದ ವಿವಿಧ ರೀತಿಯ ಗೆಜ್ಜೆಗಳು ಯಕ್ಷಗಾನ ರಂಗದ ಭೀಷ್ಮಾಚಾರ್ಯರೂ, ಕಡಲ ಕರೆಯ ಭಾರ್ಗವ ಬಿರುದಾಂಕಿತ ಡಾ। ಕೋಟ ಶಿವರಾಮ ಕಾರಂತರಿಂದ ಪ್ರಶಂಸೆಗೊಳಗಾದುದು ಆಚಾರ್ಯರಿಗೆ ಒದಗಿದ

ಪ್ರಥಮ ಶ್ರೇಣಿಯ ಪ್ರಮಾಣಪತ್ರ ಎಂದರೆ ಅದಕ್ಕೆ ಬೇರೆ ಮಾತಿಲ್ಲ. ಅಮೇರಿಕದ ಶ್ರೀಮತಿ ಮಾರ್ಥಾ ಆಸ್ಟೀನ್ ಎಂಬ ಮಹಿಳೆ ಯಕ್ಷಗಾನ ಕಲೆಯನ್ನು ಅಭ್ಯಸಿಸಿ, ಸಂಶೋಧನೆ ಮಾಡುವ ಉದ್ದೇಶದಿಂದ ನಮ್ಮ ನಾಡಿಗೆ ಬಂದರು. ಉಡುಪಿಯಲ್ಲಿ ಯಕ್ಷಗಾನ ಮದ್ದಲೆ ವಾದಕರಲ್ಲಿ ಅಗ್ರಗಣ್ಯರಾದ ಹಿರಿಯಡಕ ಗೋಪಾಲರಾಯರಲ್ಲಿ ಶಿಷ್ಯತ್ವ ಪಡೆದು ದೀರ್ಘಕಾಲ ಅಧ್ಯಯನದ ಜೊತೆಗೆ ಯಕ್ಷಗಾನ ಕಲಾವಿದೆಯೂ ಆಗಿ ಅದ್ಭುತ ಸಾಧನೆ ಮಾಡಿದರು.

ವಿಜಯ ಬೆಲ್ ಮೆಟಲ್‌ನಲ್ಲಿ ನಡೆಯುವ ಕೆಲಸ ಕಾರ್ಯಗಳಲ್ಲಿ ವಿಶೇಷ ಆಸಕ್ತಿ ತೋರಿದ ಮಾರ್ಥಾರವರು ಟಿ. ರಾಘವ ಆಚಾರ್ಯರ ಅದ್ಭುತ ಶಿಲ್ಪಕಲಾ ನೈಪುಣ್ಯತೆಗೆ ಮರುಳಾದುದಲ್ಲದೆ ಅವರು ತಯಾರಿಸಿದ ಯಕ್ಷಗಾನದ ಗೆಜ್ಜೆಗಳನ್ನು ಮೆಚ್ಚಿ ಕಾಲಿಗೆ ಕಟ್ಟಿಕೊಂಡು ಕುಣಿದು ಸಂತಸ ಪಟ್ಟರು. ಆಚಾರ್ಯರ ಗೆಜ್ಜೆಗಳು ಎಷ್ಟು ಜನಪ್ರಿಯವಾಯಿತೆಂದರೆ ಮುಂದೆ ರಾಜರ್ಷಿ ಡಾ। ವೀರೇಂದ್ರ ಹೆಗ್ಗಡೆಯವರ ಆಡಳಿತದ ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಯಕ್ಷಗಾನ ಮೇಳಕ್ಕೂ ಗೆಜ್ಜೆಗಳನ್ನು ತಯಾರಿಸಿಕೊಡುವ ಕಾರ್ಯ ನಡೆಯಿತು. ಅವಿಭಜಿತ ದ.ಕ. ಜಿಲ್ಲೆಯ ಎಲ್ಲ ಮೇಳಗಳಿಗೂ ಉತ್ತಮ ಗುಣಮಟ್ಟದ ಗೆಜ್ಜೆಗಳು ಪೂರೈಕೆಯಾದುವು. ಉಭಯ ಜಿಲ್ಲೆಗಳ ನೂರಾರು ದೇವಾಲಯಗಳಿಗೂ ಆಚಾರ್ಯರು ದೇವರ ವಿಗ್ರಹಗಳನ್ನು ಚಿಕ್ಕ, ಚಿಕ್ಕ ಮೂರ್ತಿಗಳನ್ನು ಇನ್ನಿತರ ಪೂಜಾ ಸಾಮಾಗ್ರಿಗಳನ್ನು ತಯಾರಿಸಿ ಕೊಟ್ಟಿರುವರು. ಇವರು ತಯಾರಿಸಿರುವ ಮ್ಯಾಜಿಕ್ ಹೂಜಿ ಹಲವೆಡೆ ಹೆಸರುವಾಸಿಯಾಗಿರುವುದು ಗಮನೀಯ.

ರಾಘವಾರ್ಯರು ಮುಖ್ಯ ಶಿಲ್ಪ ಕೆಲಸಗಳಲ್ಲಿ 1978ರಲ್ಲಿ ಮಂಗಳೂರಿನ ಭಗವತಿ ಕ್ಷೇತ್ರಕ್ಕೆ 100 ಕೆ.ಜಿ. ತೂಕದ ಕಂಚುಲೋಹದ ದೀಪಸ್ತಂಭವನ್ನು ತಯಾರಿಸಿಕೊಟ್ಟಿರುವುದು, 1985ರಲ್ಲಿ ಇತಿಹಾಸ ಪ್ರಸಿದ್ಧ ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವರ ಸನ್ನಿಧಾನಕ್ಕೆ 150 ಕೆ.ಜಿ. ತೂಕದ

ಕಂಚು ಲೋಹದ ಘಂಟೆಯನ್ನು ತಯಾರಿಸಿ ಕೊಟ್ಟಿರುವುದು, ಕಾರ್ಕಳಕ್ಕೆ 80 ಕೆ.ಜಿ. ತೂಕದ ಧ್ವಜಸ್ತಂಭದ (ಕೊಡಿಮರ) ಪೀಠವನ್ನು ತಯಾರಿಸಿ ನೀಡಿರುವುದು ಸೇರಿದೆ.

1980–81ರಲ್ಲಿ ಹ್ಯಾಂಡಿ ಕ್ರಾಫ್ಟ್ ಡೆವಲಪ್‌ಮೆಂಟ್ ಸೆಂಟರಿನ ವತಿಯಿಂದ ಕಂಚುಲೋಹದ ವಿವಿಧ ಆಯಾಮಗಳಲ್ಲಿ ತರಬೇತಿ ನೀಡುವವರು ಉಡುಪಿಯಲ್ಲಿ ಶಾಲೆ ಪ್ರಾರಂಭಿಸಿದರು. ಟಿ. ರಾಘವ ಆಚಾರ್ಯರನ್ನು ಮಾಸ್ಟರ್ ಕ್ರಾಫ್ಟ್‌ಮ್ಯಾನ್ ಆಗಿ ನೇಮಿಸಲಾಯಿತು. ಈ ಶಾಲೆಯಲ್ಲಿ 12 ಜನ ವಿದ್ಯಾರ್ಥಿಗಳು ಒಂದು ವರ್ಷಕಾಲ ವಿವಿಧ ರಂಗದಲ್ಲಿ ತರಬೇತಿಯನ್ನು ಪಡೆದು ನಿಸ್ಸೀಮರಾದರು. ಅದಲ್ಲದೆ 1988–89ರಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಐ.ಆರ್.ಡಿ.ಪಿ. ಮತ್ತು ಟ್ರೈಸಮ್ ಯೋಜನೆಗಳಡಿ ಕಂಚು ಲೋಹದ ವಿವಿಧ ಪರಿಕರಗಳನ್ನು ತಯಾರಿಸುವ ಕುರಿತಾದ ತರಬೇತಿಯನ್ನು ಟಿ. ರಾಘವ ಆಚಾರ್ಯರ ವಿಜಯ ಬೆಲ್ ಮೆಟಲ್ ವರ್ಕ್ಸ್‌ನಲ್ಲಿ ಆಯೋಜಿಸಲಾಯಿತು. ಈ ಶಿಬಿರದಲ್ಲಿ ಸುಮಾರು 20 ವಿದ್ಯಾರ್ಥಿಗಳು ತರಬೇತಿಯನ್ನು ಪಡೆದರು.

## ಎರಕ ಶಿಲ್ಪದಲ್ಲಿ ಲೋಹಗಳು

ತಾಮ್ರ ಲೋಹದಿಂದ ಯಾವುದೇ ಧಾತುವಿನ ಮಿಶ್ರಣವಿಲ್ಲದೆ ನೇರವಾಗಿ ಎರಕ ಸಂಬಂಧಿ ವಸ್ತುಗಳನ್ನು ತಯಾರಿಸಲಾಗುವುದಿಲ್ಲ. ಆದರೆ ತಾಮ್ರದ ತಗಡುಗಳಿಂದ ಉಬ್ಬು ಶಿಲ್ಪಕ್ಕೆ ಸಂಬಂಧಿಸಿ ವಿಗ್ರಹ, ಮುಖವಾಡ ಮೊದಲಾದವುಗಳನ್ನು ತಯಾರಿಸಬಹುದು. ಮಾತ್ರವಲ್ಲದೆ ತಾಮ್ರದ ತಗಡನ್ನು ಮರ ಅಥವಾ ಇತರ ಲೋಹಗಳ ಮೇಲೆ ಹೊರಕವಚವಾಗಿ ಹೊದಿಸಿಕೊಳ್ಳಲು ಉಪಯೋಗಿಸಬಹುದು.

1) ತಾಮ್ರ ಮತ್ತು ತವರವನ್ನು ನಿರ್ದಿಷ್ಟ ಪ್ರಮಾಣದಲ್ಲಿ ಬೆರೆಸಿ ತಯಾರಿಸುವ ಲೋಹವೇ ಕಂಚು.

ಕಂಚು ಲೋಹವನ್ನು ಗಿಂಡಿ, ಕೊಂಬಿನ ಗಿಂಡಿ, ಉರುಳಿ, ಮೊದಲಾದ ಪಾತ್ರೆಗಳನ್ನು ತಯಾರಿಸಲು ಉಪಯೊಗಿಸುವುದು. ಈ ಲೋಹವು ಬಹಳ ಕಾಠಿಣ್ಯವನ್ನು ಹೊಂದಿರುವುದು, ಆದುದರಿಂದ ಕೈತಪ್ಪಿ ಕೆಳಕ್ಕೆ ಬಿದ್ದಲ್ಲಿ ಒಡೆದುಹೋಗುವ ಅಥವಾ ಶಾಶ್ವತ ಬಿರುಕು ಬಿಡುವ ಸಂಭವ ಹೆಚ್ಚು.

2) **ಪಂಚಲೋಹ:** ತಾಮ್ರ + ತವರ + ಚಿನ್ನ + ಬೆಳ್ಳಿ + ಕಬ್ಬಿಣ (ನಿರ್ದಿಷ್ಟ ಪ್ರಮಾಣದಲ್ಲಿ ಮಿಶ್ರಗೊಳಿಸುವುದು).

**ಪಂಚಲೋಹ:**

ರಜತಂ ಸಪ್ತಭಾಗಸ್ತು
ತಾರಂ ದೃತ್ಯಂಶ ಭಾಗಚ
ಆಮ್ನಾಯ ಷಷ್ಠ ತಾಮ್ರಚ
ಕಾರ್ಷಂ ಶುದ್ಧಮಿದಂ ತ್ರಿಷ್ಯಂ
ಪಂಚಲೋಹ ಮಿದಂಭುಧ್ಯೆ

ಬೆಳ್ಳಿ–7 ಭಾಗ, ತವರ–18 ಭಾಗ, ತಾಮ್ರ–6 ಭಾಗ, ಚಿನ್ನ–5 ಭಾಗ, ಕಬ್ಬಿಣ–3 ಭಾಗ (ಒಟ್ಟು 39 ಭಾಗ ಮಾಡಿದಾಗ) ಪ್ರಮಾಣ ಪ್ರಕಾರ ಹೀಗೆ ಪಂಚಲೋಹವನ್ನು ತಯಾರಿಸಬಹುದಾದರೂ ತಮ್ಮ ಶಕ್ತ್ಯಾನುಸಾರ ಚಿನ್ನ, ಬೆಳ್ಳಿಯನ್ನು ಹಾಕಿ ಪಂಚಲೋಹ ತಯಾರಿಸಲಾಗುತ್ತದೆ. ಪಂಚಲೋಹದಿಂದ ಎಲ್ಲ ತರದ ದೇವರ, ದೈವಗಳ ವಿಗ್ರಹಗಳು ಮುಖಮೂರ್ತಿ, ಎದೆಕಟ್ಟು, ಮೊಲೆಕಟ್ಟು ಇತ್ಯಾದಿ ತಯಾರಿಸುವರು.

3) **ಹಿತ್ತಾಳೆ:** ತಾಮ್ರ ಮತ್ತು ಸತುವನ್ನು ತಕ್ಕ ಪ್ರಮಾಣದಲ್ಲಿ ಮಿಶ್ರಣ ಮಾಡಿ ಅದಕ್ಕೆ ಅವಶ್ಯವಿರುವಷ್ಟು ತವರ ಬೆರೆಸಿದಲ್ಲಿ ಹಿತ್ತಾಳೆ

ಲೋಹ ಲಭ್ಯವಾಗುವುದು. ಈ ಲೋಹದಿಂದ ಕಾಲ್ದೀಪಗಳು, ನಂದಾ ದೀಪಗಳು, ಆರತಿ ಸಾಮಾಗ್ರಿ ಇತ್ಯಾದಿಗಳನ್ನು ತಯಾರಿಸಲಾಗುವುದು.

4) **ಶುದ್ಧ ಹಿತ್ತಾಳೆ:** ತಾಮ್ರ ಮತ್ತು ಸತುವನ್ನು ನಿರ್ದಿಷ್ಟ ಪ್ರಯಾಣದಲ್ಲಿ ಮಿಶ್ರ ಮಾಡುವುದು. ಇದು ಶುದ್ಧ ಹಿತ್ತಾಳೆ ಲೋಹ. ಇದರಿಂದ ದೈವ ನರ್ತಕರು ಕೋಲ-ನೇಮ ಉತ್ಸವಗಳಲ್ಲಿ ಶಿರೋಭಾಗಕ್ಕೆ ಕಟ್ಟಿಕೊಳ್ಳುವ ಸುಂದರ ವಿನ್ಯಾಸವಿರುವ ತಲೆಮಣಿ, ತಲೆಪಟ್ಟ, ಉಬ್ಬು ಶಿಲ್ಪಕ್ಕೆ ಸಂಬಂಧಿಸಿ ವಿವಿಧ ಮಾದರಿಯ ಹರಿವಾಣಗಳು, ಪ್ರಭಾವಳಿ ಇತ್ಯಾದಿಗಳ ತಯಾರಿ ನಡೆಯುವುದು.

## ಎರಕದ ಪೂರ್ವ ತಯಾರಿ

ಯಾವುದೇ ನಿರ್ದಿಷ್ಟ ವಸ್ತುವಿನ ಎರಕ ಹೊಯ್ಯುವ ಮೊದಲು ನಾವು ಕೈಗೊಳ್ಳಬೇಕಾದ ಪ್ರಥಮ ಕರ್ತವ್ಯ ಎಂದರೆ ಎರಕದ ವಿಚಾರದಲ್ಲಿ ನಮ್ಮ ಅನುಭವವನ್ನು ಪುನರ್ ಪರೀಕ್ಷೆಗೆ ಒಳಪಡಿಸುವುದು. ಇದು ಒಂದು ತೆರನಲ್ಲಿ ಶಸ್ತ್ರ ಚಿಕಿತ್ಸೆಗೆ ಪೂರ್ವದಲ್ಲಿ ವೈದ್ಯರು ತೆಗೆದುಕೊಳ್ಳುವ ಎಚ್ಚರಿಕೆಯ ತಯಾರಿಯಂತಿರುವುದು. ಎರಕ ಹೊಯ್ಯುವುದರಲ್ಲಿ ಸೂಕ್ಷ್ಮಾತಿಸೂಕ್ಷ್ಮ ವಿಚಾರದಲ್ಲಿ ನಾವು ಎಡವಿದರೆ ಇಡೀ ಎರಕದ ಕೆಲಸ ನೀರಿನ ಮೇಲೆ ಹೋಮ ಮಾಡಿದಂತೆ ವ್ಯರ್ಥ. ಹಾಗಾಗಿ ಎಲ್ಲ ಹಂತಗಳಲ್ಲಿ ಮುಂಜಾಗ್ರತೆ ಅವಶ್ಯಕ.

ಪ್ರಥಮದಲ್ಲಿ ಯಾವ ವಸ್ತು, ವಿಗ್ರಹವನ್ನು ನಾವು ತಯಾರಿಸಲು ಇಚ್ಛಿಸುವೆವೋ (ಅಂದರೆ ದೈವದ ಮುಖ, ಎದೆಕಟ್ಟು ಇತ್ಯಾದಿ) ಅದರ ರೇಖಾಚಿತ್ರವನ್ನು ತಯಾರಿಸಿ ಅಂತಿಮಗೊಳಿಸುವುದು. ಬಳಿಕ ಆವೆಮಣ್ಣು, ಮರಳು, ಗೋಣಿಚೀಲದ ತುಂಡುಗಳು ಇವುಗಳನ್ನು ಅವಶ್ಯಕ ಪ್ರಮಾಣದಲ್ಲಿ ಮಿಶ್ರಣ ತಯಾರಿಸುವುದು. ಈ ಮಿಶ್ರಣವನ್ನು

ಚೆನ್ನಾಗಿ ಗುದ್ದುವುದು. ಹೀಗೆ ತಯಾರಾದ ಮಣ್ಣನ್ನು ಉಪಯೋಗಿಸಿ ರೇಖಾಚಿತ್ರಕ್ಕೆ ಅನುಗುಣವಾಗಿ ಒಳ ಅಚ್ಚು ತಯಾರಿಸುವುದು. ಒಳ ಅಚ್ಚಿನ ಮೇಲೆ ತೆಳುವಾದ ಮೇಣದ ಹಾಳೆಯನ್ನು ಜೋಡಿಸುವುದು. ಅದರ ಮೇಲೆ ನಾವು ಎರಕ ಹೊಯ್ಯಲು ಉದ್ದೇಶಿಸಿರುವ ಮುಖವಾಡ, ಎದೆಕಟ್ಟಿನ ವಿನ್ಯಾಸವನ್ನು ರೂಪಿಸುವುದು. ನಂತರ ಕರಗಿದ ಲೋಹವನ್ನು ತುಂಬಲು ಅದಕ್ಕಾಗಿ ನಳಿಕೆಯ ದಾರಿಗಳನ್ನು ಮೇಣದಲ್ಲಿ ಮಾಡಬೇಕು.

ಬಳಿಕ ಮೊದಲು ಎರಕಕ್ಕೆ ಒಪ್ಪಡ ಕಟ್ಟಲು (ಅಚ್ಚುಕಟ್ಟಲು) ಉಪಯೋಗಿಸಿದ ಒಮ್ಮೆ ಸುಟ್ಟ ಮಣ್ಣು, ದನದ ಸೆಗಣಿಯನ್ನು ಬೆರೆಸಿ ಚೆನ್ನಾಗಿ ಅರೆಯುವುದು. ಇದು ಅತ್ಯಂತ ನಯವಾಗಿ ಇರಬೇಕು. ಇದು Thin Layer (ತೆಳುವಾದ ಪರೆ) ಈ ಮಣ್ಣಿನ ಮಿಶ್ರಣವನ್ನು ಮೇಣದ ವಿನ್ಯಾಸದ ಮೇಲೆ ತೆಳುವಾಗಿ ಲೇಪಿಸುವರು. ಮೊದಲ ಲೇಪನವಾದ ಬಳಿಕ ಎರಕ ಹೊಯ್ಯುವ ಅಚ್ಚು ತನ್ನ ಇತಿ-ಮಿತಿಯ ಚೌಕಟ್ಟಿನೊಳಗೆ ನಿಲ್ಲುವಂತೆ ಕಬ್ಬಿಣದ ಪಟ್ಟಿಯಿಂದ ಅಚ್ಚನ್ನು ಬಿಗಿಗೊಳಿಸುವರು.

ಇದಾದ ಬಳಿಕ ಎರಡನೇ ಹಂತದಲ್ಲಿ ದೊರಗು ಮಣ್ಣು, ಸ್ವಲ್ಪ ಹಂಚಿನ ಹುಡಿ, ಮರಳು ಮತ್ತು ಒಮ್ಮೆ ಎರಕದಲ್ಲಿ ಉಪಯೋಗಿಸಿ ಬೆಂದಿರುವ ಮಣ್ಣಿನ ಮಿಶ್ರಣಕ್ಕೆ ಅಂಟು ಬರಲು ಅಗತ್ಯವಿರುವಷ್ಟು ಆವೆ ಮಣ್ಣು ಬೆರೆಸುವುದು. ಸ್ವಲ್ಪ ಗೋಣಿ ತಾಟು ಹಾಕಿ ಚೆನ್ನಾಗಿ ಅರೆಯುವುದು. ಮೊದಲ ಲೇಪನ ಒಣಗಿದ ನಂತರ ಇದನ್ನು ಹಚ್ಚುವುದು.

ಮೂರನೆಯ ಹಂತದಲ್ಲಿ ಎರಡನೇ ರೀತಿಯಲ್ಲಿ ತಯಾರಾಗುವ ತೆರನಲ್ಲಿ ಮಣ್ಣನ್ನು ತಯಾರಿಸಿ ಮತ್ತಷ್ಟು ನಯವಾಗುವಂತೆ ಮಾಡುವುದು. ಈ ಲೇಪನವನ್ನು ಮೊದಲು ಹಚ್ಚಿದ ಲೇಪನದಲ್ಲಿ ಬಿರುಕು ಕಂಡುಬಂದಲ್ಲಿ ಅದನ್ನು ತುಂಬಲು ಅನುಕೂಲವಾಗುವಂತೆ

ಸ್ವಲ್ಪ ಗಾತ್ರದ ಆವೆ ಮಣ್ಣು ಬೆರೆಸಿ, ಮೊದಲ ಲೇಪನದ ಮೇಲೆ ತೆಳುವಾಗಿ ಲೇಪಿಸುವುದು.

ಈ ರೀತಿಯಾಗಿ ಎರಕ ಹೊಯ್ಯಲು ಅವಶ್ಯವಿರುವ ಪಡಿಯಚ್ಚು (ಒಪ್ಪಡ) ತಯಾರಾಗುವುದು. ಈ ಅಚ್ಚನ್ನು ಒಣ ಬೆರಣಿ, ತೆಂಗಿನ ಕತ್ತ ಮತ್ತು ಮರದ ಕಟ್ಟಿಗೆಯನ್ನು ಉಪಯೋಗಿಸಿ ಮಾಡಿದ ಬೆಂಕಿಯಲ್ಲಿ ಬಿಸಿ ಮಾಡುವುದು. ಆಗ ಒಳಗೆ ಇರುವ ಮೇಣದ ಅಂಶವು ಕರಗಿ ನಳಿಕೆಯ (ರನ್ನರ್) ಮೂಲಕ ಹೊರಬರುವುದು. ಮೂಲ ಮೇಣದಿಂದ ಕರಗಿ ಬಂದ ಮೇಣದಲ್ಲಿ ಸುಮಾರು 60 ಶೇಕಡಾ ಮೇಣವು ಪುನರ್ ಉಪಯೋಗಕ್ಕೆ ಲಭ್ಯವಾಗುವುದು. ಮೇಣವು ಸಂಪೂರ್ಣ ಹೊರಬಂದಾಗ ಮೊದಲು ವಿನ್ಯಾಸಗೊಳಿಸಿದ ಮೇಣದ ಮೇಲೆ ಲೇಪಿಸಿದ ಮಣ್ಣಿನಲ್ಲಿ ಅಚ್ಚಾಗಿ ಉಳಿದುಕೊಳ್ಳುವುದು. ಇದು ಎರಕಕ್ಕೆ ಅವಶ್ಯವಿರುವ ಮೂಲ ಪಡಿಯಚ್ಚು. ಇದೇ ಒಪ್ಪಡ ಅಥವಾ ಅಚ್ಚು.

ಈಗ ಎರಕಕ್ಕೆ ಹೊಯ್ಯಲು ಅವಶ್ಯವಿರುವ ಲೋಹವನ್ನು ಅಣಿಗೊಳಿಸುವುದು. ಸಾಮಾನ್ಯವಾಗಿ ದೈವ ದೇವರ ಸನ್ನಿಧಾನದಲ್ಲಿ ಈ ಮೊದಲು ಪೂಜೆಗೊಂಡ ವಿಗ್ರಹಗಳು ಭಿನ್ನಗೊಂಡು, ಶಿಥಿಲವಾದಾಗ ಅದನ್ನು ವ್ಯಾಪಾರಿಗಳಿಗೆ ಮರಳಿಸಿ ಅದಕ್ಕೆ ಬದಲಾಗಿ ಹೊಸ ವಿಗ್ರಹಗಳನ್ನು ಖರೀದಿಸುವುದು ನಡೆದು ಬಂದ ಸಂಪ್ರದಾಯ. ಇಂತಹ ಲೋಹಗಳನ್ನು ಕರಗಿಸಿ ಎರಕಕ್ಕೆ ಉಪಯೋಗಿಸಬಹುದು. ಮಾರುಕಟ್ಟೆಯಲ್ಲಿ ಸಿದ್ಧ ಕಚ್ಚಾವಸ್ತು ಕೂಡಾ ಲಭ್ಯವಿರುವುದು. ಇಲ್ಲದಿದ್ದಲ್ಲಿ ಮೇಲೆ ವಿವರಿಸಿದ ವಸ್ತುಗಳನ್ನು ಉಪಯೋಗಿಸಿ ಅವಶ್ಯವಿರುವ ಲೋಹ ತಯಾರಿಸುವುದು.

ಈಗ ಮೂಸೆಯಲ್ಲಿ ಲೋಹವನ್ನು ಇಟ್ಟು ಕುಲುಮೆಯಲ್ಲಿ ಕರಗಿಸುವುದು. ಅದೇ ಹೊತ್ತಿಗೆ ಅಚ್ಚನ್ನು ಬಿಸಿ ಮಾಡುವುದು. ಅಚ್ಚು ಕಡು ಕೆಂಪು ಬಣ್ಣಕ್ಕೆ ತಿರುಗಿದಾಗ ಎರಕಕ್ಕೆ ಸಿದ್ಧವಾಯಿತೆಂದು

ತಿಳಿಯುವುದು, ಲೋಹ ಕೂಡ ಕರಗಿ ಸಿದ್ಧವಾಗುವುದು. ಅಚ್ಚನ್ನು ಒಂದು ಹೊಂಡ ತಯಾರಿಸಿ ಅದರೊಳಗೆ ಇಡುವರು. ಈ ಪರಿಕ್ರಮದಿಂದ ಎರಕ ಹೊಯ್ಯುವಾಗ ಅಚ್ಚು ಒಡೆದುಹೋಗದಂತೆ, ಒಂದು ಬದಿಗೆ ಜರಿಯದಂತೆ ಮುನ್ನೆಚ್ಚರಿಕೆ ವಹಿಸಿದಂತಾಗುವುದು. ಅಚ್ಚಿಗೆ ಕರಗಿದ ಲೋಹವನ್ನು ಮೊದಲೇ ಜೋಡಿಸಿರುವ ನಳಿಕೆಯ ಮೂಲಕ ಒಂದೇ ರೀತಿಯ ವೇಗದಲ್ಲಿ ಹೊಯ್ಯುವುದು. ಬಳಿಕ ಅಚ್ಚು ಸರಿಯಾಗಿ ತಣ್ಣಗಾಗುವವರೆಗೆ ಇರಿಸುವುದು. ಬಳಿಕ ಅಚ್ಚನ್ನು ಒಡೆಯುವುದು. ಆಗ ದೊರಗು ಸ್ವರೂಪದ ವಿಗ್ರಹ ಅಥವಾ ಮುಖವಾಡ ದೊರಕುವುದು. ಬಳಿಕ ಅದನ್ನು ಅರ, ಚಾಣ ಮೊದಲಾದವುಗಳಿಂದ ನಯಗೊಳಿಸಿ ಜೀವರೇಖೆ ಬಿಡಿಸಿ ಹೊಳಪು ನೀಡಿ ಸರಿಯಾದ ರೂಪಕ್ಕೆ ಪರಿವರ್ತಿಸುವುದು.

ಶಿಲ್ಪಿಗಳು ಯಾವುದೇ ಎರಕವನ್ನು ಪ್ರಾರಂಭ ಮಾಡುವ ಮೊದಲು ಮತ್ತು ಸಿದ್ಧಗೊಳಿಸಿದ ಬಳಿಕ ಗ್ರಾಹಕರಿಗೆ ಪೂರೈಸುವಾಗ ತಮ್ಮ ಆರಾಧ್ಯ ದೈವಗಳನ್ನು ಪೂಜಿಸಿ ವಿನಮ್ರವಾಗಿ ಪ್ರಾರ್ಥಿಸಿ ತಮ್ಮ ಕೈಂಕರ್ಯದಲ್ಲಿ ಯಶಸ್ಸು ನೀಡುವಂತೆ ಅನನ್ಯವಾಗಿ ಬೇಡಿ ಕೊಳ್ಳುವರು. ಕೆಲವೊಮ್ಮೆ ಕೈ ತುಂಬ ಕೆಲಸವನ್ನು ಹಿಡಿದ ಶಿಲ್ಪಿಗಳ ಪರಿವಾರ ತಮ್ಮ ಕಾರ್ಯ ಪೂರ್ತಿಗೊಳ್ಳುವವರೆಗೆ ಊಟ ವಿಶ್ರಾಂತಿಯ ಪರಿವೆಯೂ ಇರುವುದಿಲ್ಲ. ಅವರ ಉದ್ದೇಶವು ಪೂರ್ಣ ಜಯಪ್ರದವಾದರೆ ಮಾತ್ರ ಶಿಲ್ಪಿ ಆತ್ಮಸಂತೋಷದ ನಗೆ ಬೀರುವುದು ಸರ್ವ ವಿಧಿತ.





# ಶಿಲ್ಪಿಯ ಕೊನೆಯ ದಿನಗಳು

ಶಿಲ್ಪಿ ರಾಘಾವಾಚಾರ್ಯರು ತನ್ನ ಬದುಕಿನ ಸಂಜೆಯಲ್ಲಿ ಸಂತಸದ ದಿನಗಳನ್ನು ಕಂಡವರು. ಉಡುಪಿಯ ನಿವಾಸದಲ್ಲಿ ಪುತ್ರ ರಾಜೇಶ್ ಆಚಾರ್ಯರ ಕುಟುಂಬದ ಜೊತೆ ಹಸನಾದ ಬಾಳ್ವೆ. ಅವರ ಗಂಡು ಮಕ್ಕಳಲ್ಲಿ ಕಿರಿಯ ರಾಜೇಶ್ ಉಡುಪಿಯಲ್ಲಿ ಮಾತಾ ಪಿತೃಗಳಿಗೆ ಆಸರೆಯ ಊರುಗೋಲಾದರೆ ಹಿರಿಯವರು ಅಮೇರಿಕದಂತಹ ಆಧುನಿಕ ರಾಷ್ಟ್ರದಲ್ಲಿ ಕನ್ನಡಿಗರ ಸಾಂಸ್ಕೃತಿಕ ಚಟುವಟಿಕೆಯ ಕೇಂದ್ರ 'ಅಮ್ಮ' ಸಂಘಟನೆಯ ಮುಂಚೂಣಿಯಲ್ಲಿ ಕಾರ್ಯನಿರತರು.

ಮಕ್ಕಳೂ ವಿನಯಶೀಲತೆಯಲ್ಲಿ, ಔದ್ಯಮಿಕ ಕ್ಷೇತ್ರದಲ್ಲಿ ತಂದೆಯ ಪಡಿಯಚ್ಚು. ಆಚಾರ್ಯರ ಮನೆಗೆ ಭೇಟಿ ಕೊಟ್ಟ ಸಂದರ್ಭ ಕಂಡ ದೃಶ್ಯ ಅತ್ಯಂತ ಮನಮೋಹಕ. ಉಡುಪಿಯ ಕುಂಜಿಬೆಟ್ಟು ಪರಿಸರದಲ್ಲಿ ಆಚಾರ್ಯರ ಚಿಕ್ಕದಾದರೂ ಚೊಕ್ಕದಾದ ಮನೆ. ಅದರ ಒತ್ತಿಗೆ ಎರಕ ಶಿಲ್ಪದ ಕಾಯಕಕ್ಕೆ ಅವಶ್ಯವಿರುವ ಎಲ್ಲ ಪರಿಕರಗಳು. ಎರಕದ ಕೆಲಸಕ್ಕೆ ಭಟ್ಟಿ, ಕುಲುಮೆ, ಸಿದ್ಧ ವಸ್ತುಗಳನ್ನು ಶೇಖರಿಸಿಡುವ ವ್ಯವಸ್ಥೆ ಎಲ್ಲವೂ ಕ್ರಮಬದ್ಧವಾಗಿ ನಡೆಯುತಿತ್ತು. ಆಚಾರ್ಯರ ಮನೆಗೆ ಭೇಟಿ ಕೊಡುವ ಸಮಯ ನನ್ನ ಬಂಧು ಹಾಗೂ ರಾಜೇಶ್ ಆಚಾರ್ಯರ ನಿಕಟವರ್ತಿ ನಿಟ್ಟೂರು ಭಾಸ್ಕರ ಸುವರ್ಣರು ಮಾತುಕತೆಯಾದ ಬಳಿಕ ನಮ್ಮನ್ನು ಟಿ. ರಾಘವ

ಆಚಾರ್ಯರು ತಮ್ಮ ಕಾರ್ಯಾಗಾರಕ್ಕೆ (WorkShop) ಕರೆದೊಯ್ದರು. ಅಲ್ಲಿ ಕಳೆದ ಒಂದು ತಾಸು ನಮಗಂತೂ ಅದ್ಭುತವಾದ ಶಿಲ್ಪಶಾಸ್ತ್ರದ ಕುರಿತಾಗಿ ಅಧ್ಯಯನ ಮಾಡಿಕೊಳ್ಳುವ ಸದವಕಾಶ ದೊರಕಿತು. ಮೂಲತ ಎರಕದ ಕಾರ್ಯಕ್ಕೆ ಯಾವ ಯಾವ ಲೋಹಗಳನ್ನು ಎಷ್ಟು ಪ್ರಮಾಣದಲ್ಲಿ ಉಪಯೋಗಿಸಬೇಕು, ಪ್ರತಿಯೊಂದು ಧಾತುವಿನ ಗುಣಮಟ್ಟ ಪರೀಕ್ಷೆ ಇತ್ಯಾದಿಯನ್ನು ಕಂಠಪಾಠ ಮಾಡಿಕೊಂಡ ವಿದ್ಯಾರ್ಥಿಯಂತೆ ವಿವರಿಸಿದರು.

ಮಿಶ್ರಣದ, ಎರಕ ಕಾರ್ಯದ ಎಲ್ಲ ಲೆಕ್ಕಾಚಾರಗಳೂ ಕರಾರುವಾಕ್ಕು. ಅವರ ಅಂತರ್ಯದಲ್ಲಿ ಮುಪ್ಪುರಿಗೊಂಡಿರುವ ಅನುಭವ ಯುವಕರನ್ನು ನಾಚಿಸುವಂತೆ ಹೌದು. 84ರ ಹರೆಯದಲ್ಲೂ ಧರ್ಮಪತ್ನಿಯ ಜೊತೆ ಕಾರ್ಯಾಗಾರದಲ್ಲಿ ಎಲ್ಲ ಕರ್ತವ್ಯಗಳನ್ನು ಯಾವೊಂದು ಲೋಪದೋಷವಿಲ್ಲದೆ ನಿರ್ವಹಿಸುವ ಅಸೀಮ ವ್ಯಕ್ತಿತ್ವ ಟಿ. ರಾಘವ ಆಚಾರ್ಯರದ್ದು. ತನ್ನ ಕರ್ತವ್ಯ ದಕ್ಷತೆಯಲ್ಲಿ ಎಷ್ಟು ಗಾಂಭೀರ್ಯ ಇರಲಿ ಅದನ್ನು ಕಳೆದು ಬಿಡುವು ದೊರೆತಾಗ ಎಲ್ಲ ದುಗುಡ ದುಮ್ಮಾನಗಳಿಂದ ದೂರವಾಗಿ ಮೊಮ್ಮಕ್ಕಳ ಜೊತೆ ಲಲ್ಲೆಗರೆಯುತ್ತ, ಪ್ರೀತಿ ವಿಶ್ವಾಸ, ಕಕ್ಕುಲತೆಯನ್ನು ಹಂಚಿಕೊಳ್ಳುವ ಮುಗ್ಧ ಮನಸ್ಸಿನ ಆಚಾರ್ಯ ದಂಪತಿಗಳು ಪ್ರಶಂಸಾರ್ಹರು, ವಂದನಾರ್ಹರು. ಅದೊಂದು ನಂದಗೋಕುಲವೇ ಸರಿ. ಸುದೀರ್ಘ ಬದುಕಿನಲ್ಲಿ ಸಾರ್ಥಕ್ಯತೆಯ ಪಟ್ಟವೇರಲು ಅನೇಕ ಕಲ್ಲು–ಮುಳ್ಳುಗಳ ಕಷ್ಟ–ಕೋಟಲೆಗಳ ದುರ್ಗಮ ಹಾದಿಯನ್ನು ತುಳಿಯುತ್ತ, ಸಿಹಿಕಹಿಗಳೆರಡನ್ನು ಅತ್ಯಂತ ನಿರ್ಭಾವುಕ ಮನಸ್ಸಿನಿಂದ ಎದುರಿಸುತ್ತ, ಅಂಜದೆ, ಅಳುಕದೆ, ಗುರಿಮುಟ್ಟಿ ಯುದ್ಧ ಗೆದ್ದು ಬಂದ ವೀರಯೋಧರ ಕಣ್ಣುಗಳಲ್ಲಿ ಮಿಂಚುವ ಅದಮ್ಯ ತೇಜಸ್ಸು ಶಿಲ್ಪಿ ಟಿ. ರಾಘವ ಆಚಾರ್ಯರ ಮುಖಾರವಿಂದದಲ್ಲಿ ಲಕಲಕಿಸುವುದನ್ನು ಕಂಡು ನಮಗಾದ ಸಂತಸ ವರ್ಣನಾತೀತ. ಈ ದಂಪತಿಗಳು ಅಭಿನಂದನಾರ್ಹರು.

## ವಿದಾಯದ ಆಘಾತ

ಇಹದ ಯಾತ್ರೆಯನ್ನು ಮುಗಿಸಿ, ತನ್ನ ತಾತ್ಕಾಲಿಕ ಬಿಡದಿಯಲ್ಲಿದ್ದ ಎಲ್ಲರಿಗೂ ವಿದಾಯ ಹೇಳಿ ಆಚಾರ್ಯರ ಪರಂಧಾಮ ಸೇರುವ ಆ ಘಳಿಗೆ ಅಷ್ಟು ಆಕಸ್ಮಿಕವಾಗಿ ಒದಗಿ ಬರುವುದು ಎಂಬ ಕಠೋರ ಸತ್ಯವನ್ನು ಪ್ರಾಯಶಃ ಯಾರೂ ಊಹಿಸಿರಲಾರರು. ಅಂತಹ ಆಘಾತದ ಬರಸಿಡಿಲು ಎರಗಿದ್ದು 01-04-2016ರ ಮಧ್ಯಾಹ್ನ ಹೊತ್ತು. ಮಧ್ಯಾಹ್ನದ ಆರೋಗಣೆ ಮುಗಿಸಿ ಇನ್ನೇನು ವಿಶ್ರಾಂತಿ ಪಡೆಯುವ ಸಂದಿಗ್ಧ. ಯಮಪಾಶ ಆಚಾರ್ಯರ ಕೊರಳಿಗೆ ಹೃದಯಾಘಾತದ ರೂಪದಲ್ಲಿ ಬಂದೆರಗಿದುದು ಸತ್ಯ. ವಿಷಯ ತಿಳಿದು ಸ್ಥಳೀಯ ಬಂಧುಗಳು ಮತ್ತು ಅಪಾರ ಅಭಿಮಾನಿಗಳು ಮನೆಯಲ್ಲಿ ಜಮಾಯಿಸಿ ಕಣ್ಣೀರುಗರೆದರು. ಕೇರಳ ಮತ್ತು ಕರ್ನಾಟಕದ ನಡುವೆ ಒಂದು ಶತಮಾನದಷ್ಟು ಕಾಲ ಬೆಸೆಯಲ್ಪಟ್ಟಿದ್ದ ಶಿಲ್ಪಕಲಾ ಸಂಪನ್ನತೆಯ ಬೆಸುಗೆಯ ಕೊಂಡಿ ಕಳಚಿಹೋಯಿತು. ಅವರ ಅಂತ್ಯಸಂಸ್ಕಾರಕ್ಕೆ ಮಕ್ಕಳು, ಕುಟುಂಬದ ಸದಸ್ಯರು, ಅಪಾರ ಬಂಧು ಮಿತ್ರರು ಹಾಜರಿದ್ದು ಅಗಲಿದ ಹಿರಿಯ ಚೇತನಕ್ಕೆ ಹೃದಯ ತುಂಬಿದ ವಿದಾಯ ಹೇಳಿದರು.

15-04-2016ರಂದು ಟಿ. ರಾಘವ ಆಚಾರ್ಯರ ಶಿಲ್ಪಕಲಾ ಪ್ರೌಢಿಮೆಯ ಕಾರ್ಯಕ್ಷೇತ್ರ-ಗೀತಾಚಾರ್ಯನ ನೆಲೆಬೀಡು ಉಡುಪಿ ಶ್ರೀಕೃಷ್ಣ ಮಠದ ಪಕ್ಕದಲ್ಲಿದ್ದ ಮಥುರಾ ಛತ್ರದಲ್ಲಿ ನುಡಿ ನಮನ ಮತ್ತು ವಿಶ್ವಕರ್ಮ ಸಮಾರಾಧನೆ ಜರಗಿತು. ಅಂದು ಸೇರಿದ ಅಭಿಮಾನಿಗಳ ಗುಂಪಿನಲ್ಲಿ ಪಯ್ಯನ್ನೂರು ಸೇರಿದಂತೆ ಕೇರಳ

ರಾಜ್ಯದಿಂದ ಬಂದಿರುವ 300ಕ್ಕೂ ಅಧಿಕ ಸಂಖ್ಯೆಯ ಬಂಧುಗಳು ಸಮಾರಾಧನೆಗೆ ಸಾಕ್ಷಿಯಾದರು. ಸಭೆಯಲ್ಲಿ ಅನೇಕ ಶಿಲ್ಪಿಗಳು, ಜಾನಪದ-ದೈವಾರಾಧನೆಯ ಪಂಡಿತರು, ವೇದಾಂತಿಗಳು, ರಾಜಕೀಯ ನಾಯಕರು, ಜನಪ್ರತಿನಿಧಿಗಳು ಟಿ. ರಾಘವ ಆಚಾರ್ಯರ ಹಿರಿತನ, ಅದ್ಭುತ ಕಲಾವಂತಿಕೆಯನ್ನು, ಕರ್ತವ್ಯ ಶಕ್ತಿಯನ್ನು ಬಾಯಿ ತುಂಬಾ ಕೊಂಡಾಡಿದರು. ಅಗಲಿದ ದಿವ್ಯ ಚೇತನಕ್ಕೆ ನುಡಿ ನಮನ ಸಲ್ಲಿಸಿದರು.

ಒಟ್ಟಿನಲ್ಲಿ ಮಧ್ಯಕಾಲದ ಸಂಸ್ಕೃತಿಗೂ, ಆಧುನಿಕ ಕಾಲ ಶತಮಾನದ ಎಳೆಯ ಪೀಳಿಗೆಗೆ ಒಂದು ಕಳಚಲಾಗದ ಬೆಸುಗೆಯಾಗಿ ಎಲ್ಲರೊಡನೆ ನಕ್ಕುನಲಿದು, ಎಳೆಯ ಶಿಲ್ಪಕಲಾಭ್ಯಾಸಿಗಳಿಗೆ ನಲ್ಮೆಯ ಗುರುಗಳಾಗಿ ಅನೇಕ ವಿದ್ಯಾರ್ಥಿಗಳನ್ನು ನುರಿತ ಶಿಲ್ಪಿಗಳಾಗಿ ತಯಾರು ಮಾಡುವಲ್ಲಿ ಓರ್ವ ಪ್ರಬುದ್ಧ ಪ್ರಾಧ್ಯಾಪಕರಾಗಿ, ಬೆಂಗಳೂರು, ಮುಂಬಯಿ ಮೊದಲಾದೆಡೆ ಕಾರ್ಯಾಗಾರಗಳನ್ನು ಸಂಘಟಿಸಿ ಮಿಂಚಿ ಅಸ್ತಂಗತರಾದ ಟಿ. ರಾಘವ ಆಚಾರ್ಯರನ್ನು ಮನಮುಟ್ಟಿ ನಿಲ್ಲುವ ರೀತಿ ವಿದಾಯವನ್ನಿತ್ತು ಉಡುಪಿಯ ಮಹಾಜನತೆ ತನ್ನ ವಿನಮ್ರ ಗೌರವವನ್ನು ಸಂದಾಯ ಮಾಡಿರುವುದು ದಾಖಲಾರ್ಹವಾಯಿತು.

ಟಿ. ರಾಘವ ಆಚಾರ್ಯರ ಧರ್ಮಪತ್ನಿ-ಮಹಾತಾಯಿ ರಾಧಮ್ಮನವರು ಎಲ್ಲ ದುಃಖ ದುಮ್ಮಾನಗಳನ್ನು ಕ್ರಮೇಣ ಮರೆತು ಪುತ್ರ ರಾಜೇಶ್ ಆಚಾರ್ಯ ಮತ್ತು ಸೊಸೆಯನ್ನೊಡಗೂಡಿ ಪತಿಯುಳಿಸಿಹೋದ ಶಿಲ್ಪಕಲಾ ಕೈಂಕರ್ಯವನ್ನು ಮುಂದುವರೆಸಿಕೊಂಡು ಹೋಗುತ್ತಿರುವುದು ಕಲಾಭಿಮಾನಿಗಳ ಭಾಗ್ಯವೆನ್ನಬಹುದು.

*



## ಪ್ರಶಸ್ತಿ ಮತ್ತು ಸನ್ಮಾನಗಳು

೧೯೮೫ – ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ದ.ಕ, – ಸನ್ಮಾನ
೧೯೯೦ – ಮಿತ್ತನಡ್ಕ ಮಲರಾಯ ದೈವಸ್ಥಾನ, ಮಿತ್ತನಡ್ಕ – ಸನ್ಮಾನ
೨೦೦೭ – ಕರ್ನಾಟಕ ಶಿಲ್ಪಕಲಾ ಅಕಾಡೆಮಿ ಗೌರವ ಪ್ರಶಸ್ತಿ
೨೦೧೩ – ಧರ್ಮನೇಮ ಸಂದರ್ಭದಲ್ಲಿ ಸನ್ಮಾನ, ಮಾಲಾಡಿ ಬೀಡು – ಮಂಗಳೂರು
೨೦೧೪ – ಬನ್ನಂಜೆ ಬಾಬು ಅಮೀನ್ ಜಾನಪದ ಕಲಾವಿದ ಪ್ರಶಸ್ತಿ
೨೦೧೫ – ಕನಾರ್ಟಕ ಜಾನಪದ ಪರಿಷತ್ತು, ಗೌರವ ಪ್ರಶಸ್ತಿ

# ಭಾಗವಹಿಸಿದ ಪ್ರದರ್ಶನಗಳು, ರಚಿಸಿದ ಕಲಾಕೃತಿಗಳು ಮತ್ತು ಪ್ರದರ್ಶನಗಳು

1955 – ಪ್ರಗತಿ ಮೈದಾನ, ದೆಹಲಿ
1982 – ಪರ್ಯಾಯ ವಸ್ತುಪ್ರದರ್ಶನ, ಉಡುಪಿ
1984 – ಪರ್ಯಾಯ, ಉಡುಪಿ
1985 – ಕಾವೇರಿ, ಮಂಗಳೂರು
1992 – ವಾರಣಾಸಿ
1994 – ಓಣಂ ಪ್ರದರ್ಶನ, ತಿರುವನಂತಪುರ
1996 – ತುಳುಪರ್ಬ – ತುಳುಕೂಟ, ಉಡುಪಿ
1996 – ಪರ್ಯಾಯ ಮಹೋತ್ಸವ, ಉಡುಪಿ
1997 – ಪಾರಂಪರಿಕ್ – ಕಾರಿಗಾರ್, ಮುಂಬೈ
1998 – ತಾಜ್ ಮಹೋತ್ಸವ – ಆಗ್ರಾ
2000 – ಪಾರಂಪರಿಕ್ ಕಾರಿಗಾರ್, ಮುಂಬೈ
2001 – ಪಾರಂಪರಿಕ್ ಕಾರಿಗಾರ್, ವಿಜಯಪುರ
2002 – ಕ್ರಾಫ್ಟ್ ಬಜಾರ್ – ಮಂಗಳೂರು
2003 – ಉಡುಪಿ ಉತ್ಸವ – ಉಡುಪಿ
2004 – ಮಹಾ ಮಸ್ತಕಾಭಿಷೇಕ – ಕಾರ್ಕಳ
2006 – ಕುಟೀರ, ಬೆಂಗಳೂರು
2007 – ಕ್ರಾಫ್ಟ್ ಕೌನ್ಸಿಲ್ ಆಫ್ ಇಂಡಿಯಾ– ಕೊಯಂಬುತ್ತೂರು
2009 – ವಿಶ್ವ ತುಳು ಸಮ್ಮೇಳನ, ಉಡುಪಿ
(ಕೋಡೆಇನಿಎಲ್ಲೆ) ದೈವಾಭರಣ
2014 – ವಿಶ್ವ ತುಳು ಪರ್ಬ – ಮಂಗಳೂರು



ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಶಸ್ತಿ



ಬನ್ನಂಜೆ ಬಾಜು ಅಮೀನ್ ಪ್ರಶಸ್ತಿ

ಎನ್‌ಎಸ್‌ಡಿ ವಿದ್ಯಾರ್ಥಿಗಳಿಗೆ ತರಬೇತಿ ಶಿಬಿರ





## ಬನ್ನಂಜೆ ಬಾಬು ಅಮೀನ್

72 ವರ್ಷ ವಯಸ್ಸಿನ ಬನ್ನಂಜೆ ಬಾಬು ಅಮೀನ್‌ರವರ ಜನನ ಉಡುಪಿ. ತುಳು ಮತ್ತು ಕನ್ನಡ ಸಾಹಿತಿಯಾಗಿ, ಜಾನಪದ ಹಾಗೂ ದೈವಾರಾಧನೆಯಲ್ಲಿ ಆಳವಾದ ಅಧ್ಯಯನ ನಡೆಸಿದರು. ಅವಿಭಜಿತ ದ.ಕ. ಜಿಲ್ಲೆಯಲ್ಲಿ ತುಳು ಜಾನಪದದಲ್ಲಿ ಉನ್ನತ ವಿದ್ವಾಂಸರಾಗಿ ಬೆಳೆದರು. ತುಳುನಾಡಿನ ಗರೋಡಿಗಳು, ತುಳು ಜಾನಪದ ಮತ್ತು ದೈವಾರಾಧನೆಯ ಕುರಿತಾಗಿ ಈವರೆಗೆ ಸುಮಾರು 20 ಕೃತಿಗಳನ್ನು ರಚಿಸಿದ್ದಾರೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಪುಸ್ತಕ ಬಹುಮಾನ, ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ರಾಜ್ಯ ಪ್ರಶಸ್ತಿ, ಸಂದೇಶ ಸಾಂಸ್ಕೃತಿಕ ಪ್ರತಿಷ್ಠಾನದ ತುಳು ಸಾಹಿತ್ಯ ಪ್ರಶಸ್ತಿ, ಉಡುಪಿ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ, ಕು.ಶಿ. ಜಾನಪದ ಪ್ರಶಸ್ತಿಗಳು ಸೇರಿದಂತೆ ಹಲವಾರು ಸನ್ಮಾನಗಳನ್ನು ಪಡೆದಿರುವರು. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ, ಕನ್ನಡ ಮಾಸಿಕಗಳ ಸಂಪಾದಕರಾಗಿ, ಅಂಕಣ-ಕಾರರಾಗಿ, ಟಿ.ವಿ. ಚಾನೆಲ್‌ಗಳಲ್ಲಿ ವ್ಯಾಖ್ಯಾನಕಾರರಾಗಿ, ಯಕ್ಷಗಾನ ಕಲಾವಿದರಾಗಿ ಅನೇಕ ರಂಗಗಳಲ್ಲಿ, ತನ್ನ ಛಾಪನ್ನು ಒತ್ತಿರುವ ಹಿರಿಯರು. ಉಡುಪಿಯ ಕೆಮ್ಮಲಜೆ ಜಾನಪದ ಪ್ರಕಾಶನವು ಕಳೆದ ಏಳು ವರ್ಷಗಳಿಂದ ಇವರ ಹೆಸರಿನಲ್ಲಿ ಜಾನಪದ ವಿದ್ವಾಂಸ ಮತ್ತು ಜಾನಪದ ಕಲಾವಿದ ಪ್ರಶಸ್ತಿ ನೀಡುತ್ತಿದೆ




**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**
ಕನ್ನಡ ಭವನ, ಮೇಲ್ಮನೆ, ಚಾಲುಕ್ಯ ವಿಭಾಗ,
ಜೆ.ಸಿ. ರಸ್ತೆ, ಬೆಂಗಳೂರು - 560 002
Email: shilpakala.academy@gmail.com,
Web: www.karnatakashilpakalaacademy.org
080- 22278725